# ದ್ರಾವಿಡ ಭಾಷಾ ಪರಿವಾರ

ಕನ್ನಡ ವಿಶ್ವ ವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿರುವ ನಿಬಂಧ

ಮಾರ್ಗದರ್ಶಕರು

ಪ್ರೊ॥ ಜಯಪ್ರಕಾಶ್ ಗೌಡರು

ಸಂಶೋಧಕರು

ಛಾಯಾ ಆರ್. ಪಿ.









[illegible]ರ್ನಾಟಕ ಸಂಘ (ರಿ) ಮಂಡ್ಯ

[illegible]ಡಾ. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ.

[illegible] ಕನ್ನಡ ವಿಶ್ವ ವಿದ್ಯಾಲಯದ ಮಾನ್ಯತೆ ಪಡೆದಿದೆ.)

೨೦೦೭-೨೦೦೮

# ದ್ರಾವಿಡ ಭಾಷಾ ಪರಿವಾರ

ಕನ್ನಡ ವಿಶ್ವ ವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿರುವ ನಿಬಂಧ

ಮಾರ್ಗದರ್ಶಕರು

ಪ್ರೊ॥ ಜಯಪ್ರಕಾಶ್‌ಗೌಡರು

ಸಂಶೋಧಕರು

ಛಾಯಾ ಆರ್. ಪಿ.








## ಕರ್ನಾಟಕ ಸಂಘ (ರಿ) ಮಂಡ್ಯ

ಎಂ. ಎಲ್. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ.

( ಹಂಪಿಯ ಕನ್ನಡ ವಿಶ್ವ ವಿದ್ಯಾಲಯದ ಮಾನ್ಯತೆ ಪಡೆದಿದೆ.)

೨೦೦೭-೨೦೦೮

# ಅಭ್ಯರ್ಥಿಯ ಘೋಷಣೆ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರದಲ್ಲಿ 2007-08 ನೇ ಸಾಲಿಗೆ ಕನ್ನಡ ಎಂ.ಫಿಲ್. ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್.ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು "ದ್ರಾವಿಡ ಭಾಷಾ ಪರಿವಾರ" ವಿಷಯವನ್ನು ಆಯ್ಕೆ ಮಾಡಿಕೊಂಡು ಪ್ರೊ.ಜಯಪ್ರಕಾಶಗೌಡ ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತ ಕಾಲಿಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ಧೃಢೀಕರಿಸುತ್ತಿದ್ದೇನೆ. ಕನ್ನಡ ವಿಶ್ವ ವಿದ್ಯಾನಿಲಯವು ನೀಡುವ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಸ್ಥಳ : ಮಂಡ್ಯ

ದಿನಾಂಕ: 15/9/08

ಇಂತಿ

ತಮ್ಮ ವಿಧೇಯ ವಿದ್ಯಾರ್ಥಿ

Chaya R.P.

ಛಾಯಾ. ಆರ್.ಪಿ.

# ಧೃಢೀಕರಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್. ಪದವಿಗಾಗಿ **ಛಾಯಾ. ಆರ್. ಪಿ.**ರವರು **''ದ್ರಾವಿಡ ಭಾಷಾ ಪರಿವಾರ''**ಎಂಬ ವಿಷಯವನ್ನು ನನ್ನ ಮಾರ್ಗ ದರ್ಶನದಲ್ಲಿ ರಚಿಸಿರುತ್ತಾರೆ. ಈ ನಿಬಂಧವನ್ನು ಯಾವುದೇ ಗ್ರಂಥ ಹಾಗೂ ನಿಯತ ಕಾಲಿಗಳಲ್ಲಿ ಪ್ರಕಟಿಸಿಲ್ಲವೆಂದು ಧೃಡಿಕರಿಸುತ್ತೇನೆ.

ಸ್ಥಳ : ಮಂಡ್ಯ

ದಿನಾಂಕ: 15/9/08

**ಪ್ರೊ. ಜಯಪ್ರಕಾಶಗೌಡ**

ಅಧ್ಯಕ್ಷರು

ಎಂ.ಎಲ್. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ,

ಕರ್ನಾಟಕ ಸಂಘ, ಮಂಡ್ಯ.

# ದ್ರಾವಿಡ ಭಾಷಾ ಪರಿವಾರ

## ಪರಿವಿಡಿ

1. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

2. ಅಧ್ಯಾಯ : ೧ ಭಾಷೆಯ ಸ್ವರೂಪ ಮತ್ತು ಲಕ್ಷಣ

3. ಅಧ್ಯಾಯ : ೨ ಭಾರತೀಯ ಭಾಷಾ ಪರಿವಾರಗಳು

4. ಅಧ್ಯಾಯ : ೩ ದ್ರಾವಿಡ ಪರಿವಾರದ ಭಾಷೆಗಳು

5. ಅಧ್ಯಾಯ : ೪ ದ್ರಾವಿಡ ಪರಿವಾರದ ಭಾಷೆಗಳ ವರ್ಗೀಕರಣ ಮತ್ತು ವೈಶಿಷ್ಟ್ಯಗಳು.

6. ಉಪಸಂಹಾರ

7. ಅನುಬಂಧ

   1) ಅಡಿ ಟಿಪ್ಪಣಿ

   2) ಗ್ರಂಥ ಸೂಚಿ

   3) ರೇಖಾ ಚಿತ್ರಗಳು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಭಾಷೆ ವಿಶ್ವದ ಪರಮ ಆಶ್ಚರ್ಯಗಳಲ್ಲಿ ಒಂದಾಗಿದೆ. ಅದು ಭೇದ ಭಾವವಿಲ್ಲದೆ ಬಡವ ಶ್ರೀಮಂತರ ಮನಸ್ಸಿನ ಭಾವನೆಗಳನ್ನು ವ್ಯಕ್ತಪಡಿಸುವ ಮಾಧ್ಯಮವಾಗಿದೆ. ಮಾನವನ ಬೌದ್ಧಿಕ, ಮಾನಸಿಕ, ಸಾಂಸ್ಕೃತಿಕ ಎಲ್ಲ ಬಗೆಯ ಪ್ರಗತಿಗಳಿಗೆ ಅನುಗುಣವಾಗಿ ಇಂದು ಭಾಷೆ ವಿಶ್ವದಾದ್ಯಂತ ವಿಸ್ತರಿಸಿದೆ. ಇಂತಹ ಭಾಷೆ ಎಂಬುವುದು ಭೌತಿಕ ವಸ್ತುಗಳಂತೆ ಸುಲಭವಾಗಿ ನಾಶವಾಗುವಂಥಹದಲ್ಲ, ಅದು ಎಷ್ಟು ಹಳೆಯದಾಗಿದೆಯೂ ಅಷ್ಟೇ ಹೊಸದಾಗಿಯು ಇರುತ್ತದೆ. ಭಾಷೆಯಲ್ಲಿರುವ ಒಂದೊಂದು ಪದವೂ ಕಾಲಾಂತರದಿಂದ ಉದಯಿಸಿದಾಗಿವೆ. ಭಾಷೆಗಳು ಪ್ರಾಚೀನ ಸಂಸ್ಕೃತಿಯ ಮೇಲೆ ಅಮೂಲ್ಯವಾದ ಬೆಳಕು ಬೀರುವ ಮಹತ್ವವಾದ ಸಾಧನಗಳಲ್ಲಿ ಒಂದಾಗಿದೆ. ಪ್ರಪಂಚದ ಮೂಲೆ ಮೂಲೆಗಳಲ್ಲಿ ಚದುರಿ ಹೋಗಿರುವ ಜನರ ವೈವಿಧ್ಯ- ಭಿನ್ನತೆಗಳ ಹಿಂದಿರುವ ಏಕ ಸೂತ್ರತೆಯನ್ನು ಅದು ಎತ್ತಿ ತೋರಿಸುತ್ತದೆ.

ಇಂತಹ ಭಾಷೆಯ ಸ್ವರೂಪ ಲಕ್ಷಣ ರೂಪ, ರಚನೆ, ಇತ್ಯಾದಿ ವಿಚಾರಗಳ ಗಮನ ಹರಿಸುವುದು ಬಹಳ ಅವಶ್ಯಕ ಭಾಷಾ ವ್ಯಾಸಂಗ ಗ್ರೀಸ್ ಮತ್ತು ಭಾರತದೇಶಗಳಲ್ಲಿ ಎರಡು ಸಾವಿರ ವರ್ಷಗಳಿಗೂ ಹಿಂದಿನಿಂದ ನಡೆಯುತ್ತಿದ್ದರೂ ತೌಲನಿಕವಾಗಿ, ಶಾಸ್ತ್ರೀಯವಾಗಿ ಆದ ಅಧ್ಯಯನ ಮತ್ತು ಸಂಶೋಧನೆಗಳು ಪ್ರಾರಂಭವಾದದ್ದು ಸುಮಾರು ನೂರೈವತ್ತು ಕೆಲವು ಯುರೋಪಿಯನ್ನ ಭಾಷೆಗಳಗೂ ಸಂಸ್ಕೃತಕ್ಕೂ ಇದ್ದ ಸಂಬಂಧವನ್ನು ವಿವರಿಸಿದಾಗ ಭಾಷಾ ಶಾಸ್ತ್ರ ಅಧ್ಯಯನದಲ್ಲಿ ಆಸಕ್ತಿ ಉಂಟಾಯಿತು. ಪ್ಲೆಗಲ್, ರಾಸ್ಕ್‌ಮಾಸ್‌ರಾಸ್ಕ್, ಗ್ರೀಮ್ ಸಹೋದರರು, ಬಾಪ್, ಹೊಬೋಲ್ಟ್, ರಾಪ್ ಆಗಸ್ಟ್ ಪ್ಲೀಷರ್, ಕರ್ತಿಯಸ್, ಮ್ಯಾಡ್‌ವಿಂಗ್, ಮ್ಯಾಕ್ಸ್‌ಮುಲ್ಲರ್, ಮುಂತಾದ ವಿದ್ವಾಂಸರು ಭಾಷಾ ವಿಜ್ಞಾನದಲ್ಲಿ ಅಧ್ಯಯನ ಸಂಶೋಧನೆಗಳನ್ನು ನಡೆಸಿ ವಿಶಿಷ್ಟ ಫಲಿತಾಂಶಗಳನ್ನು ಹೊರತಂದರು.

ಭಾರತ ದೇಶದಲ್ಲಿ ಕಳೆದ ನೂರು ವರ್ಷಗಳಿಂದ ಈ ಸಂಶೋಧನೆ ಕಾರ್ಯ ಮಂದಗತಿಯಿಂದ ಸಾಗುತ್ತಿದೆ. ವಿದೇಶಿಗಳಿಂದ ಬಂದ ಪಾದ್ರಿಗಳೂ ಉನ್ನತಾಧಿಕಾರಿಗಳೂ ಈ ಬಗೆಗೆ ತುಂಬ ಆಸಕ್ತಿ ವಹಿಸಿದ್ದಾರೆ. ದ್ರಾವಿಡ ಭಾಷೆಗಳು ಸಂಸ್ಕೃತ ಜನ್ಯವಲ್ಲ ಎಂದು ಮೊಟ್ಟ ಮೊದಲಿಗೆ ಅನುಮಾನಿಸಿದವರು ಫ್ರಾನ್ಸಿಸ್ ವೈಟ್ ಎಲ್ಲಿಸ್, ಇತನನ್ನು ದ್ರಾವಿಡ ಭಾಷಾ ಶಾಸ್ತ್ರದ ಜನಕನೆಂದು ಕರೆಯುತ್ತಾರೆ, ೧೮೫೬ರಲ್ಲಿ ಪ್ರಕಟವಾದ ಕಾಲ್ಡ್‌ವೆಲ್‌ನ ವ್ಯಾಕರಣ ದ್ರಾವಿಡ ಭಾಷಾಶಾಸ್ತ್ರದ ಸಂಶೋಧಕರಿಗೆ ಬೈಬಲ್ ಆಗಿ ಉಳಿದಿದೆ. ರಾಸ್‌ಮಸ್‌ರಾಸ್ಕ್, ಕೃಷ್ಣಮಾಚಾರ್ಯ, ರ್‍ಯೈರೆ, ಚ್ರೌನ್, ಗುಂಡರ್ಟ್, ಕಿಟಲ್, ಬ್ರಿಗೆಲ್, ಹಡ್ಸನ್, ರೀಮ್ಸ್, ರಾಮಸ್ವಾಮಿ ಅಯ್ಯರ್, ರಾ. ನರಸಿಂಹಾಚಾರ್, ಭಟ್ಟಾಚಾರ್ಯ, ಎಮಿನೊ ಬರೊ, ಮುಂತಾದ ವಿದ್ವಾಂಸರು ದ್ರಾವಿಡ ಭಾಷಾ ಶಾಸ್ತ್ರ ವಿಭಾಗದಲ್ಲಿ ಪ್ರಶಂಸನಿಯವಾದ ಸಂಶೋಧನೆಗಳನ್ನು ಪ್ರಕಟಿಸಿದ್ದಾರೆ.

ದ್ರಾವಿಡ ಪದದ ನಿಷ್ಪತ್ತಿಯ ಬಗೆಗೆ ದ್ರಾವಿಡರು ಯಾರು? ಎಲ್ಲಿಂದ ಬಂದವರು? ಎಂಬ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರ ಇನ್ನು ದೊರೆತಿಲ್ಲ, ದ್ರಾವಿಡರ ಇತಿಹಾಸವನ್ನು ನೋಡಿದಾಗ ಪುರಾಣ, ಗ್ರಂಥಗಳಲ್ಲಿಯೂ ದ್ರಾವಿಡ ಮತ್ತು ಆರ್ಯರ ಬಗೆಗೆ ಇರುವಂತ ಉಲ್ಲೇಖಗಳನ್ನು ನೋಡಬಹುದಾಗಿದೆ.

ಶ್ರೀ ಮದ್ವಿಷ್ಣು ಭಾಗವತದಲ್ಲಿ ಹೀಗೊಂದು ಶ್ಲೋಕವಿದೆ [1]

ದ್ರವಿಡೇ ಭಕ್ತಿರುತ್ಪನ್ನಾ

ವೃದ್ಧಿಂ ಕರ್ನಾಟಕೇ ಗತಾ

ಭಕ್ತಿ ಪಂಥವು ಮೊದಲು ಹುಟ್ಟಿದ್ದು ದ್ರಾವಿಡ ದೇಶದಲ್ಲಿ ಅಂದರೆ ತಮಿಳು ನಾಡಿನಲ್ಲಿ ಅನಂತರ ಅದು ಅಭಿವೃದ್ಧಿಯನ್ನು ಪಡೆದದ್ದು ಕರ್ನಾಟಕದಲ್ಲಿ ಎಂದು ಭಾಗವತ ಪುರಾಣ ಹೇಳುತ್ತದೆ. ಇಲ್ಲಿ ಭಕ್ತಿ ಪಂಥ ವೆಂದರೆ ನಾವು ಈಗ ಪ್ರಸ್ತಾಪಿಸುತ್ತಿರುವ ದಾಸ ಪಂಥವಲ್ಲ, ದಾಸಪಂಥವು ಮೊದಲು ಕರ್ನಾಟಕದಲ್ಲಿ ಹುಟ್ಟಿ ಆನಂತರ ತಮಿಳುನಾಡಿಗೆ ಬಂದದ್ದು, ಪುರಂದರದಾಸರ ಕೀರ್ತನೆಗಳ ಕಾಲ ಮೊದಲು, ತ್ಯಾಗರಾಜರ ಕಾಲ ಆನಂತರ. ಇವೆಲ್ಲ ಈಗಿನ ವಿಚಾರಗಳು, ಭಾಗವತದ ರಚನೆ ಇದಕ್ಕಿಂತೆಲ್ಲ ಎಷ್ಟೋ ಕಾಲ ಹಿಂದಿನದು.

ದ್ರಾವಿಡ ಶಬ್ದದಿಂದ ತಮಿಳು ಎಂಬ ಪದ ಹುಟ್ಟಿದೆ. ದ್ರಾವಿಡ ದ್ರಮಿಳ ತಮಿಳು ದಕ್ಷಿಣ ಭಾರತವನ್ನು ದ್ರಾವಿಡದೇಶ ಎನ್ನಬಹುದು. ಇಲ್ಲಿ ಪಂಚ ದ್ರಾವಿಡ ಭಾಷೆ ಬಳಕೆಯಲ್ಲಿದೆ. ಈ ಪಂಚದ್ರಾವಿಡ ಭಾಷೆಗಳಿಗೂ, ಮೂಲ ದ್ರಾವಿ ಭಾಷೆ ತಮಿಳೇ ಆಗಿದೆ. ಅವರ ಸಿಂಹ ವಿರಚಿತವಾದ ಅಮರಕೋಶದಲ್ಲಿ ದ್ರಾವಿಡ ಎಂಬ ಪದವೂ ಇಲ್ಲ ಅದರ ಅರ್ಥವೂ ಇಲ್ಲ. ಅದರೆ ''ದ್ರಾವಿಡಕ '' ಎಂಬ ಪದವಿದೆ, ಇದು ಒಂದು ಸಸ್ಯದ ಹೆಸರು, ಕಚ್ಚೂರಗಡ್ಡೆಗೆ ಸಂಸ್ಕೃತದಲ್ಲಿ ದ್ರಾವಿಡಕ ಎಂಬ ಹೆಸರಿದೆ, ದ್ರಾವಿಡರು ಮೊದಲು ಬಂದವರು, ಆರ್ಯರು ಆನಂತರ ಬಂದವರು, ಅಮರಕೋಶಕಾರನು ''ಆರ್ಯ'' ಎಂಬ ಪದವನ್ನು ಬಳಸಿದ್ದಾನೆ. ಆರ್ಯಾವರ್ತ ಎಂಬ ಪದವನ್ನು ಬಳಸಿದ್ದಾನೆ. ''ಆರ್ಯಾ ವರ್ತ'' ಎಂಬುದು ಒಂದು ಸ್ಥಳದ ಹೆಸರು, ಆರ್ಯಾವರ್ತವು ಎಲ್ಲಿದೆ ಅಂದರೆ ಹಿಮಾಲಯ ಮತ್ತು ವಿಂಧ್ಯ ಪರ್ವತಗಳ ಮಧ್ಯದಲ್ಲಿದೆಯಂತೆ,

ಆರ್ಯಾವತ ಃ ಪುಣ್ಯಭೂಮಿಃ [2]

ಮಧ್ಯಂ ವಿಂಧ್ಯ ಹಿಮಾಗಯೋಃ

ಸಂಸ್ಕೃತ ನಾಟಕಗಳಲ್ಲಿ ಹೆಂಡತಿ ಗಂಡನನ್ನು ''ಆರ್ಯಪುತ್ರ'' ಎಂದು ಗಂಡ ಹೆಂಡತಿಯನ್ನು ''ಆಯಾ'' ಎಂದು ಸಂಭೋದಿಸುವ ಪದ್ಧತಿಯಿದೆ, ಕನ್ನಡದಲ್ಲಿ ಸಂಭೋದನೆಯ ಸಂಧರ್ಭದಲ್ಲಿ ''ಅಯ್ಯೋ'' ಎಂಬ ಪದವನ್ನು

ಬಳಸುತ್ತಾರೆ. ಉದಾಹರಣೆಗೆ ಆರ್ಯಾರಾಜನೆ, ಅಯ್ಯಾ ಸೇವಕನೆ ಇತ್ಯಾದಿ. ಕೇರಳ ತಮಿಳು ನಾಡುಗಳಲ್ಲಿ ''ಆರ್ಯಾಭವನ'' ಎಂಬ ಹೆಸರುಗಳನ್ನು ಹೋಟೆಲ್‌ಗಳಿಗೆ ಇಡಲಾಗಿದೆ.

ತುಳುನಾಡಿನಲ್ಲಿ ತುಳು ಬ್ರಾಹ್ಮಣರನ್ನು ಕೆಲವು ಸಮುದಾಯದವರು ಈಗಲೂ ''ಅರ್ಯಾ'' ಎಂದು ಸಂಭೋದಿಸುವ ಪದ್ಧತಿ ಇದೆ, ಆಂಧ್ರದಲ್ಲಿ ''ಅಯ್ಯಂಗಾರ್'' ಪದ ತಮಿಳುನಾಡಿನಲ್ಲಿ ''ಅಯ್ಯರ್'' ಎಂಬ ಪದ ರೂಢಿಯಲ್ಲಿದೆ. ಕಾಸರಗೋಡು ಜಿಲ್ಲೆಯ ಬಾಕುಡ ಸಮಾಜದವರು ತಮ್ಮ ಜಾತಿಯ ಬಗೆ ಹೇಳುವಾಗ ಎಂಕ್ಲು ದಿರಡೇರ್ (ನಾವು ದ್ರಾವಿಡರು) ಎಂದು ಅಭಿಮಾನದಿಂದ ಹೇಳಿಕೊಳ್ಳುವ ಪದ್ಧತಿ ಈಗಲೂ ರೂಢಿಯಲ್ಲಿದೆ.

ಹೀಗೆ ದ್ರಾವಿಡ ಪದ ಜನಾಂಗ, ಪ್ರದೇಶ, ಭಾಷೆಯನ್ನು ಪ್ರತಿನಿಧಿಸುತ್ತದೆ. ಇದರ ಬಗೆ ಆದಿಕಾಲದಿಂದಲೂ ದಾಖಲೆಗಲು ಇರುವುದನ್ನು ಗಮನಿಸಬಹುದಾಗಿದೆ.

ಭಾಷೆಗಳ ಅಧ್ಯಯನದ ಹಿನ್ನೆಲೆಯಲ್ಲಿ ಅದರಲ್ಲಿಯೂ ದಕ್ಷಿಣ ಭಾಗದ ಭಾಷೆಗಳ ಅಧ್ಯಯನವನ್ನು ಅನೇಕ ಸಂಸ್ಥೆಗಳು ನಿರ್ವಹಿಸಿವೆ. ದಕ್ಷಿಣ ಏಷಿಯಾದ ಭಾಷಾ ವ್ಯತ್ಯಾಸಗಳ ಅಧ್ಯಯನಕ್ಕೆ ಸಂಬಂದಿಸಿದಂತೆ ಮಹತ್ವದ ಮಾಹಿತಿಯನ್ನು ಒದಗಿಸಿಕೊಟ್ಟು ಕೃತಿ ''ಲಿಂಗ್ವಿಸ್ಟಿಕ್ ಡೈವರ್ಸಿಟಿ ಇನ್ ಸೌತ್ ಏಷಿಯಾ'' ಎಂಬ ಸಂಪುಟ ಇದರಲ್ಲಿ ದ್ರಾವಿಡ ಭಾಷೆಗಳಾದ ತಮಿಳು, ಮತ್ತು ಕನ್ನಡ ಸೇರಿದಂತೆ ವಿವಿಧ ದ್ರಾವಿಡ ಭಾಷೆಗಳಿಗೆ ಸಂಂಬಧಿಸಿದ ವಿಚಾರಗಳಿವೆ, ಗ್ರಿಯರ್‌ಸನ್‌ರ ಸ್ಮರಣೀಯ ಕೃತಿ'' ಲಿಂಗ್ವಿಸ್ಟಿಕ್ ಸರ್ವೇ ಆಫ್ ಇಂಡಿಯಾ'' ಮೂಲಕ ದ್ರಾವಿಡ ಭಾಷೆಗಳ ಉಪಭಾಷಾಅಧ್ಯಯನ ಪ್ರಾರಂಭವಾಯಿತು. ಈತ ಭಾರತದ ಹಲವು ಪ್ರಮುಖ ಭಾಷೆಗಳ ಜೊತೆ ಉಪಭಾಷೆಗಳಿಗೆ ಪ್ರಮುಖ್ಯತೆ ನೀಡಿ ಅವುಗಳ ಅಧ್ಯಯನವನ್ನು ಆರಂಭಿಸಿದೆ. ಅದರೆ ಈತ ದ್ರಾವಿಡ ಪ್ರದೇಶದ ಪ್ರಮುಖ ಭಾಗವಾದ ಮದರಾಸು ಸಂಸ್ಥಾನವನ್ನೇ ತನ್ನ ಸರ್ವೇಕ್ಷಣೆಯಿಂದ ಕೈ ಬಿಟ್ಟನು, ಅದರೂ ಈತ ತಮಿಳು, ಮಲೆಯಾಳಂ, ಕನ್ನಡ, ತೆಲುಗು, ಕುರುಖ್, ಮಲ್ತೊ, ಕುಯೀ, ಬ್ರಾಹೂಈ, ಕುಲಾಮಿ ಹಾಗೂ ಅರೆದ್ರಾವಿಡ ಭಾಷೆಗಳಾದ ಲಹಂದಿ, ಭರಿಯಾಗಳೆ ಮಾದರಿಗಳನ್ನು ತನ್ನ ಗ್ರಂಥದಲ್ಲಿ ಒದಗಿಸಿದ್ದಾನೆ, ಗ್ರಂಥದ ಪ್ರಸ್ತಾವನೆ ಸಂಪುಟ ಮತ್ತು ನಾಲ್ಕನೇ ಸಂಪುಟಗಳು ದ್ರಾವಿಡ ಭಾಷೆಗಳಿಗೆ ಸಂಬಂಧಿಸಿದವುಗಳಾಗಿವೆ.

''ಇಂಟರ್‌ನ್ಯಾಷನಲ್ ಜರ್ನಲ್ ಆಫ್ ಡ್ರಮೀಡಿಯನ್ ಲಿಂಗ್ವಿಸ್ಟಿಕ್ಸ್' ಗಾಗಿ ಪುಣೆಯ ಡೆಕ್ಕನ್ ಕಾಲೇಜಿನ ಭಾಷಾ ಸರ್ವೇಕ್ಷಣಾ ಯೋಜನೆಯಡಿಯಲ್ಲಿ ಕನ್ನಡ, ತೆಲುಗು, ಮತ್ತು ಮರಾಠಿ ಭಾಷೆಗಳ ಉಪ ಭಾಷೆಗಳು ಸೇರಿದಂತೆ ಸರ್ವೇಕ್ಷಣೆಯನ್ನು ನಡೆಸಲಾಗಿದೆ. ಡಾ॥ ಡಿ.ಎನ್.ಶಂಕರಭಟ್ಟರ ಮಾರ್ಗದರ್ಶನದಲ್ಲಿ ಎ.ಎಸ್.ಆಚಾರ್ಯ ಆರ್. ಮಹಾದೇವನ್ ಮತ್ತು ಯು.ಪಿ. ಉಪಾಧ್ಯಾಯ ಅವರುಗಳು ನಡೆಸಿದ ಸರ್ವೇಕ್ಷಣೆಗಳ ವರದಿಗಳಲ್ಲಿ ಕನ್ನಡದ ಉಪ ಭಾಷೆಗಳ ವಿವರಣಾತ್ಮಕ ವ್ಯಾಕರಣಗಳನ್ನು ಒದಗಿಸಲಾಗಿದೆ. ಡಾ. ಎ. ಎಂ. ಘಾಟಗೆಯವರ ಮಾರ್ಗದರ್ಶನದಲ್ಲಿ ಕೈಗೊಳ್ಳಲಾದ ಮರಾಠಿ ಉಪಭಾಷೆಗಳ ಸರ್ವೇಕ್ಷಣೆಯು ದಕ್ಷಿಣ ಕನ್ನಡದಲ್ಲಿ ಪ್ರಚಲಿತವಿರುವ ಕೊಂಕಣಿ ಮತ್ತು

ಕಾಸರಗೋಡಿನಲ್ಲಿ ಮಾತನಾಡುವ ಮರಾಠಿ ಉಪಭಾಷೆಗಳ ವಿವರಣೆಗಳನ್ನು ನೀಡುತ್ತದೆ. ಅಣ್ಣಾಮಲೈ ವಿಶ್ವವಿದ್ಯಾಲಯದ ಭಾಷಾ ವಿಜ್ಞಾನ ವಿಭಾಗವು ನಡೆಸಿದ ತಮಿಳು ಉಪಭಾಷಾ ಸರ್ವೇಕ್ಷಣೆಯ ಮೂಲಕ ಅನೇಕ ಯೋಜನಾ ವರದಿಗಳು ಸಿದ್ಧಗೊಂಡಿವೆ. ಆಂಧ್ರಪ್ರದೇಶಸಾಹಿತ್ಯ ಆಕಾಡೆಮಿಯು ವೃತ್ತಿಪದಗಳ ಅಧ್ಯಯನ ಮಾಲಿಕೆಯಡಿಯಲ್ಲಿ ಅನೇಕ ವೃತ್ತಿ ಪದಕೋಶಗಳನ್ನು ಪ್ರಕಟಿಸಿದೆ. ಭದ್ರಿರಾಜು ಕೃಷ್ಣಮೂರ್ತಿಯವರ ಕೃಷಿ ಪದಕೋಶವು ಇವುಗಳಲ್ಲಿ ಮೊದಲನೆಯದು. ಡಾ. ವಿ. ಐ. ಸುಬ್ರಹ್ಮಣ್ಯಂ ಅವರ ಮೇಲ್ವಿಚಾರಣೆಯಲ್ಲಿ ಕೇರಳ ವಿಶ್ವವಿದ್ಯಾಲಯದ ಭಾಷಾ ವಿಜ್ಞಾನ ವಿಭಾಗವು ಕೈಗೊಂಡ ಸಣ್ಣ ಪ್ರಮಾಣದ ಉಪಭಾಷಾ ಸರ್ವೇಕ್ಷಣಾ ಯೋಜನೆಯು ಮುಖ್ಯವಾಗಿ ಉಪಭಾಷಾ ಭೂಪಟಗಳನ್ನು ಮತ್ತು ಪ್ರತಿಯೊಂದು ಉಪಭಾಷೆಗಳ ವಿವರಣಾತ್ಮಕ ವ್ಯಾಕರಣಗಳನ್ನು ಸಿದ್ಧಪಡಿಸುತ್ತಾ ಗಮನ ಹರಿಸಿವೆ.

ಈ ರೀತಿಯಾಗಿ ದ್ರಾವಿಡ ಭಾಷೆಗಳ ಪರಿವಾರದಲ್ಲಿ ಬರುವಂತಹ ಎಲ್ಲ ಭಾಷೆ ಉಪಭಾಷೆಗಳನ್ನು ಪರಿಪೂರ್ಣವಾಗಿ ಆರಂಭದಿಂದ ಅಂತ್ಯದವರೆಗೂ ವೈಜ್ಞಾನಿಕವಾಗಿ ಅಧ್ಯಯನ ಮಾಡುವ ಕಾರ್ಯ ಇನ್ನು ನಡೆಯಬೇಕಾಗಿದೆ. ಈ ನಿಟ್ಟಿನಲ್ಲಿ ಅನೇಕ ಯುವಸಾಹಿತಿಗಳು, ವಿದ್ವಾಂಸರು, ಕಾರ್ಯ ನಿರ್ವಹಿಸಬೇಕಾಗಿದೆ.

ಹಂಪಿ ವಿಶ್ವವಿದ್ಯಾನಿಲಯದ ಎಂ.ಫಿಲ್. ಪದವಿಗಾಗಿ ರಚಿಸಿದಂತಹ ದ್ರಾವಿಡಭಾಷಾ ಪರಿವಾರಗಳು ಎಂಬ ನಿಬಂಧದ ಅಡಿಯಲ್ಲಿ ಭಾಷೆಗಳ ಉಗಮ ಸ್ವರೂಪ ಲಕ್ಷಣಗಳನ್ನು ತಿಳಿಸುವ ಹಿನ್ನಲೆಯಲ್ಲಿಯೇ ಭಾರತದಲ್ಲಿ ಇರುವಂತಹ ಭಾಷಾ ಪರಿವಾರಗಳನ್ನು ಪರಿಚಯಿಸುವ ಯತ್ನ ಮಾಡಲಾಗಿದೆ. ಅದರಲ್ಲಿ ಮುಖ್ಯವಾಗಿ ನಿಬಂಧದ ವಿಷಯದಂತೆಯೇ ದ್ರಾವಿಡ ಭಾಷಾ ಪರಿವಾರಗಳು ಅವುಗಳನ್ನು ವೈಜ್ಞಾನಿಕವಾಗಿ ದಕ್ಷಿಣ ದ್ರಾವಿಡ ಭಾಷೆಗಳು, ಮಧ್ಯದ್ರಾವಿಡ ಭಾಷೆಗಳು ಉತ್ತರ ದ್ರಾವಿಡ ಭಾಷೆಗಳೆಂದು ವರ್ಗೀಕರಸಿಕೊಂಡು ಅದರಲ್ಲಿ ಬರುವಂತಹ ಗುರುತಿಸಿರುವಂತಹ ಉಪಭಾಷೆಗಳನ್ನು ಮೇಲ್ಬಾಗದಲ್ಲಿ ಪರಚಯಿಸುವ ಪ್ರಯತ್ನ ಮಾಡಲಾಗಿದೆ. ಇದು ಒಂದು ಸಣ್ಣದಾದ ಕಾರ್ಯವಾಗಿದೆ. ದ್ರಾವಿಡ ಭಾಷೆಗಳ ವೈಶಿಷ್ಟ್ಯಗಳಲ್ಲಿ ಆಳವಾದ ಕ್ರಮದಲ್ಲಿ ಅಧ್ಯಯನ ಮಾಡದೆ ಒಂದು ಮೇಲ್ಬಾಗದ ಪರಿಚಯವನ್ನು ಮಾಡಿಕೊಡುವ ಪ್ರಯತ್ನವಾಗಿದೆ.

ಅಧ್ಯಾಯ - ೧

# ಭಾಷೆಯ ಸ್ವರೂಪ ಲಕ್ಷಣ

# ಭಾಷಾ ವರ್ಗೀಕರಣ

1. ಭೌಗೋಳಿಕ ವರ್ಗೀಕರಣ
2. ಜನಾಂಗಿಕ ವರ್ಗೀಕರಣ
3. ರಾಚನಿಕ ವರ್ಗೀಕರಣ
4. ವಾಂಶಿಕ ವರ್ಗೀಕರಣ

# ಭಾಷೆಯ ಸ್ವರೂಪ

ಮನುಷ್ಯ ಬುದ್ಧಿಜೀವಿ. ಈ ಜಗತ್ತಿನ ಮಿಕೆಲ್ಲ ಜೀವಿಗಳಿಂದ ಈತನನ್ನು ಪ್ರತ್ಯೇಕಗೊಳಿಸುವುದು ಅವನ ಭೌದ್ಧಿಕತೆ ,ಬೌದ್ಧಿಕ ಶಕ್ತಿ ತನ್ನ ಬುದ್ಧಿಶಕ್ತಿಯಿಂದ ಮನುಷ್ಯ ಭಾಷೆಯನ್ನು ರೂಪಿಸಿಕೊಂಡಿದ್ದಾನೆ. ಇದು ಮನುಷ್ಯನಿಗೆ ನಿಸರ್ಗದತ್ತವಾದ, ಸಹಜವಾದ, ಸ್ವಾಭಾವಿಕವಾದ ಕ್ರಿಯೆಯಲ್ಲ. ಭಾಷೆ ರಕ್ತಗತವಾಗಿ, ವಂಶವಾಹಿಯಾಗಿ ಬರುವುದಿಲ್ಲ. ಇಂದು ಪರಿಸರದಿಂದ ಕಲಿಕೆಯಿಂದ ಬರುವಂತಹದ್ದು. ಚಾಮ್‌ಸ್ಕಿ ಹೇಳುವಂತೆ ಭಾಷೆಯನ್ನು ಕಲಿಯಲು ಸಹಾಯಕವಾಗಿ ಮನುಷ್ಯನಲ್ಲಿ ಒಂದು ಶಕ್ತಿ ಅಥವಾ ಸಮಾರ್ಥ್ಯ ಇದೆ. ಆದ್ದರಿಂದಲೇ ತಾನಿರುವ ಮನೆ, ಪರಿಸರದ ಭಾಷೆಯನ್ನು ಸಹಜವಾಗಿ ಕಲಿಯಬಲ್ಲ, ಮಾತನಾಡಬಲ್ಲ, ಇದು ಮನುಷ್ಯರೆಲ್ಲರಿಗೂ ಒಂದು ಶಕ್ತಿ ಅಥವಾ ಸಾಮರ್ಥ್ಯ ಇದೆ. ಆದ್ದರಿಂದಲೇ ತಾನಿರುವ ಮನೆ, ಪರಿಸರದ ಭಾಷೆಯನ್ನು ಸಹಜವಾಗಿ ಕಲಿಯಬಲ್ಲ, ಮಾತನಾಡಬಲ್ಲ, ಇದು ಮನುಷ್ಯ ರೆಲ್ಲರಿಗೂ ಅನ್ವಯವಾಗುವ ಭಾಷಾ ಸಾಮರ್ಥ್ಯವೇ ಹೊರೆತು ನಿರ್ಧಿಷ್ಟ ಭಾಷೆಯ ಅರಿವು ತಂದೆ-ತಾಯಿಯರಿಂದ ಮಕ್ಕಳಿಗೆ ಬರುವುದಿಲ್ಲ. ಪ್ರಾಣಿಗಳು ಭಾವನೆಗಳನ್ನು ತಮ್ಮದೇ ಕೆಲವು ಕ್ರಿಯೆಗಳಿಂದ, ವರ್ತನೆ, ಧ್ವನಿಗಳಿಂದ ವ್ಯಕ್ತಿಪಡಿಸಬಹುದು. ಜೀವಿಗಳಿಗೂ ಅವುಗಳದೇ ಆದ ವಿಶಿಷ್ಟ ಸಂಪರ್ಕ , ಸಂವಹನ ವಿಧಾನಗಳಿವೆ. ಅವುಗಳಲ್ಲಿಯೂ ಧ್ವನಿ ಮಾದ್ಯಮವೂ ಇದೆ. ಆದರೆ ಅವು ಆಮೂರ್ತ ಅಲೋಚನೆಗಳನ್ನು ವ್ಯವಸ್ಥಿತವಾದ ಸಾಂಕೇತಿಕ ಧ್ವನಿ ಸಮೂಹಗಳ ರೂಪದಲ್ಲಿ ತಿಳಿಸಲಾರವು.ಅವುಗಳಿಗೆ ಬಾಯಿ ಆಹಾರ ಕ್ರಮಕ್ಕಾಗಿ ವಿಕಾಸಗೊಂಡಿದೆ. ಮನುಷ್ಯ ಬಾಯಿಯ ತುಟ, ನಾಲಿಗೆ, ಕಂಠಗಳನ್ನು ನಿಯಂತ್ರಿಸಿ ಬಳಸಿ ಸಂಕೇತ ಧ್ವನಿಗಳನ್ನಾಗಿ ಪರಿವರ್ತಿಸಿ ಮನಸ್ಸಿನ ಇಚ್ಛೆ ತಿಳಿಸಬಲ್ಲ. ಆದ್ದರಿಂದ ಭಾಷೆ ಒಂದು ನಿರ್ಧಿಷ್ಟ ಪರಿಸರದಲ್ಲಿ ಬಾಲ್ಯದಿಂದ ಕಲಿಯುವುದರಿಂದ ಬರುತ್ತದೆಯೇ ಹೊರೆತು ಹುಟ್ಟನೊಡನೆ ಬರುವುದಿಲ್ಲ. ಭಾಷೆ, ವ್ಯಕ್ತಿ,ಕುಟುಂಬ, ಸಮೂದಾಯ, ಸಮಾಜ ಪ್ರದೇಶಗಳಲ್ಲಿ ನಿರ್ಧಿಷ್ಟ ಪರಿಸರದ ಪರಸ್ಪರ ಒಪ್ಪಿಗೆಯ ರೂಢಿಯಿಂದ ಬಂದ ಒಂದು ವ್ಯವಸ್ಥೆಯಾಗುತ್ತದೆ.

ಭಾಷೆಯನ್ನು ನಮ್ಮವರು ಬೆಳಕು,ಜ್ಯೋತಿ ಎಂದರು. ಅಲ್ಲಮನ ವಚನದ ಸಾಲು ''ಮಾತೆಂಬುದು ಜ್ಯೋತಿರ್‌ಲಿಂಗ ''ಎಂಬುದು ತುಂಬ ವ್ಯಾಪಕವಾದ ಗಹನವಾದ ಅರ್ಥವನ್ನು ಒಳಗೊಂಡಿದೆ. ಭಾಷೆ ಇಲ್ಲದಿದ್ದರೆ ನಮ್ಮ ಜೀವನ ಕತ್ತಲು. ವ್ಯವಹರಿಸಲು ಸಾಧ್ಯವಾಗುತ್ತಿರಲಿಲ್ಲ.

ಇದಮಂಧಂತಮ: ಕೃತ್ಸ್ನಂ ಜಾಯತೇ ಭುವನೆತ್ರಯಂ ।[3]

ಯದಿ ಶಬ್ದಾಹ್ವಯಂ ಜ್ಯೋತಿ : ಅಸಂಸಾರಾನ್ನ ದೀಪ್ಯತೇ॥

ಎಂಬ ಸಂಸ್ಕೃತದ ಪ್ರಸಿದ್ದ ಉಕ್ತಿಯುಂಟು. ಅಂದರೆ ಭಾಷೆಯೆಂಬ ಬೆಳಕು ಇಲ್ಲದಿದ್ದರೆ ಜಗತ್ತೇ ಕತ್ತಲಲ್ಲಿ

ಮುಳುಗಿರುತ್ತಿತ್ತು. ಮನುಷ್ಯನಿಗೆ ವ್ಯವಹಾರವಾಗಲಿ ಆತ ತನ್ನ ಮನಸ್ಸನ್ನು ಬಿಚ್ಚಿಟುವುದಾಗಲಿ, ಆಲೋಚನೆಗಳನ್ನು ತಿಳಿಸುವುದಾಗಲಿ ಆಗುತ್ತಿರಲಿಲ್ಲ. ಸಂಜ್ಞೆಗಳ ಮೂಲಕ ವ್ಯವಹರಿಸುವ ಮಿತಿ ಮತ್ತು ಇರುತ್ತಿರುತ್ತೇನೋ, ಪ್ರಾಣಿಗಳೂ ಭಾವನೆಗಳನ್ನು ಸಂಜ್ಞೆಗಳ ಮೂಲಕ ಸೂಚಿಸಬಹುದು.

ಇಂತಹ ಬದುಕಿಗೆ ಬೆಳಕಾದ ಮುನುಷ್ಯನಿಗೆ ಬಗೆ ಬಗೆಯಲ್ಲಿ ಉಪಯುಕ್ತವಾದ ಭಾಷೆಯ ಬಗ್ಗೆ ಒಂದು ಸೂತ್ರದಲ್ಲಿ ವಿವರಣೆ ಕೊಡುವುದು ಕಷ್ಟ ಆದರೂ ಕೆಲವು ಭಾಷಾ ವಿಜ್ಞಾನಿಗಳು ಸೂತ್ರ ರೂಪವಾಗಿ ಹೇಳಲು ಪ್ರಯತ್ನಿಸಿದ್ದಾರೆ. ಜೆ.ಬಿ.ಕ್ಯಾರಲ್ ಯೊದೃಚ್ಚಿಕ ಧ್ವನಿ ಸಂಕೇತಗಳ ಮತ್ತು ಧ್ವನಿಯ ಅನುಕ್ರಮಣಿಕೆಗಳು ರಚನಾ ಪದ್ಧತಿಯಂತೆ ಕೂಡಿ ಒಂದು ಜನಸಮೂದಾಯವು ಪರಸ್ಪರ ವ್ಯಕ್ತಿ ಸಂಪರ್ಕಕೆ ಬಳಸಬಹುದಾದ ಮತ್ತು ಮಾನವ ಪರಿಸರದಲ್ಲಿನ ವಸ್ತು ಘಟನೆ ಮತ್ತು ಕ್ರಿಯೆಗಳನ್ನು ವಿಸ್ತಾರವಾಗಿ ದಾಖಲುಗೊಳಿಸುವ ಧ್ವನಿ ವ್ಯವಸ್ಥೆಯನ್ನು ಭಾಷೆ ಎಂದು ಕರೆಯುತ್ತಾರೆ ಎಂದಿದ್ದಾನೆ. [4]ಸ್ಟುರ್ಟವಾಂಟ್‌ನು ಒಂದು ಸಮಾಜದ ವ್ಯಕ್ತಿಗಳು ಪರಸ್ಪರ ವ್ಯವಹಾರಕ್ಕಾಗಿ ಬಳಸುವ ಯಾದೃಚ್ಚಿಕ ಧ್ವನಿ ಸಂಕೇತಗಳ ವ್ಯವಸ್ಥೆಯೇ ಭಾಷೆ ಎಂದಿದ್ದಾನೆ.

ಭಾಷೆ ಧ್ವನಿ ಸಂಕೇತಗಳ ವ್ಯವಸ್ಥೆ, ವ್ಯವಸ್ಥೆ ಕ್ರಮ ಬದ್ಧತೆ ಇದ್ದಾಗ ಮಾತ್ರ ಒಬ್ಬರು ಇನ್ನೊಬ್ಬರನ್ನು ಅರ್ಥ ಮಾಡಿಕೊಳ್ಳಲು ಸಾಧ್ಯ. ಇದು ಕಲಾನುಕ್ರಮದಲ್ಲಿ ರೂಢಿಯಿಂದ ಒಂದು ಭಾಷಾ ಸಮಾಜದಲ್ಲಿ ಅಥವಾ ಪ್ರದೇಶದಲ್ಲಿ ನಿಯಮ ಬದ್ಧವಾಗುತ್ತದೆ. ಹಾಗೇ ಧ್ವನಿ ಸಂಕೇತಗಳು.

[5]ಹಾಕೆಟ್ ಎಂಬಾತ ಭಾಷೆಯ ಏಳು ಲಕ್ಷಣಗಳನ್ನು ಗುರುತಿಸಿದ್ದಾನೆ.

**1) ದ್ವಿರೂಪ**

ಎಂದರೆ ಇಬ್ಬಗೆ, ಜೋಡಿ ಬಗೆ, ಪ್ರತಿಭಾಷೆಯೂ ಒಂದು ಸ್ವರದಲ್ಲಿ ಮಹತ್ವದ ಧ್ವನಿ ಘಟಕಗಳ ವ್ಯವಸ್ಥೆಯನ್ನು ಹೊಂದಿರುತ್ತದೆ. ಇದನ್ನು ಧ್ವನಿಮಾ ಎಂದು ಕರೆಯುತ್ತಾರೆ. ಇದು ಅರ್ಥವಿಲ್ಲದ ಘಟಕ. ವರ್ಣ ಕನ್ನಡದ ವರ್ಣಮಾಲೆಯನ್ನು ನೆನಪಿಸಿಕೊಳ್ಳಬಹುದು. ಇನ್ನೊಂದು ಸ್ತರದಲ್ಲಿ ಪ್ರತಿಭಾಷೆಯು ಆಕೃತಿಗಳ ಘಟಕಗಳನ್ನು ಹೊಂದಿರುತ್ತದೆ. ಇದನ್ನು ಆಕೃತಿಮಾ ಎಂದು ಕರೆಯುತ್ತಾರೆ. ಇದು ಅರ್ಥ ಇರುವ ಘಟಕ, ಧ್ವನಿಮಾಗಳ ಅರ್ಥ ಪೂರ್ಣ ಹೊಂದಾಣಿಕೆಯ ವ್ಯವಸ್ಥೆಯೇ ಆಕೃತಿಮಾ. ವರ್ಣಮಾಲೆಯಲ್ಲಿನ ವರ್ಣಗಳಿಂದ ಆದ ಪದಗಳನ್ನು ನೆನಪಿಸಿಕೊಳ್ಳಬಹುದು. ಹೀಗೆ ಭಾಷೆಯ ರಚನೆ ಎರಡು ಬಗೆಯದಾಗಿರುತ್ತದೆ.

**2) ಉತ್ಪಾಧಕತೆ**

ಭಾಷೆಯ ರಚನಾಂಗಗಳನ್ನು ಸೇರಿಸಿ ಹೊಸ ಶಬ್ದರೂಪಗಳನ್ನು ಹೊರಡಿಸಲು ಸಾಧ್ಯ. ಈ ಶಬ್ದಗಳನ್ನು ಆಡುವವರಾಗಲಿ ಕೇಳುವವರಾಗಲಿ ಈ ಹಿಂದೆ ಹೇಳಿಲ್ಲದಿರಬಹುದು. ಕೇಳಿಲ್ಲದಿರಬಹುದು. ಈ ರೂಪದಲ್ಲಿ ಆದರೂ ಈ ಹೊಸ ಶಬ್ದರೂಪವೂ ಕಷ್ಟವಿಲ್ಲದೆ ಅರ್ಥವಾಗುತ್ತದೆ. ಇಂಥವನ್ನು ಉತ್ಪಾದನೆಗಳೆನ್ನುತ್ತಾರೆ. ಉದಾಹರಣೆ ನಿಸಾರ್ ಅವರ ದುಡ್ಡಸ್ತಿಕೆ ಸ್ರೀಮಂತ

ಎಂಬ ಶಬ್ದ ರೂಪಗಳು. ಇದು ಮನುಷ್ಯ ಭಾಷೆಗೆ ಮಾತ್ರ ಸಾಧ್ಯ. ಹೊಸ ಶಬ್ದಗಳ ಸೃಷ್ಟಿ ಪ್ರಾಣಿ, ಪಕ್ಷಿ ಇತ್ಯಾದಿಗಳಿಗೆ ಸಾಧ್ಯವಿಲ್ಲ. ಮನುಷ್ಯ ಭಾಷೆ ಶ್ರೀಮಂತವಾಗಿ ಬೆಳೆಯಲು ಉತ್ಪಾದಕತೆ ಕಾರಣ.

**3) ಯಾದೃಚ್ಛಿಕತೆ**

ಯಾವುದೇ ನಿರ್ಧಿಷ್ಟ ಭಾಷೆಯು ನಿರ್ದೇಶಿತ ಶಬ್ದ ಲಕ್ಷಣಕ್ಕೂ ಅದರಿಂದ ಸೂಚಿತವಾಗುವ ಅರ್ಥಕ್ಕೂ ಸಹಜವಾದ ಅಂತರ್ಗತವಾದ ಸಂಬಂಧ ಇಲ್ಲದಿರುವುದು. ಉದಾಹರಣೆಗೆ ದುಂಬಿಯ ಸಂದೇಶ ಪ್ರಸಾರ ವಿಧಾನ ಗಮನಿಸಿ. ದುಂಬಿಗಳು ಕುಣಿಯುತ್ತಾ ಹಾರುವಾಗ ಅವುಗಳ ಚಲನೆಯ ವಿಧಾನ ಮಕರಂದವಿರುವ ದೂರ ಅಥವಾ ನೆಲೆಯನ್ನು ಸೂಚಿಸಬಹುದು. ನೇರವಾಗಿ ಸೂಚಿಸುವ ಈ ಬಗೆಯನ್ನು ಉಕ್ತಸಂಗತಿಗಳ ನೇರಸೂಚನೆ ಎನ್ನುತ್ತಾರೆ. ಆದರೆ ಭಾಷೆಯಲ್ಲಿ ಧ್ವನಿ ಸಮೂಹಕ್ಕೆ ಉಕ್ತಸಂಗತಿ ಅಥವಾ ವಸ್ತುವಿಗೂ ಇಂತಹ ನೇರ ಅಂತರ್ಗತ ಸಂಬಂಧವಿಲ್ಲ. ಹಿಂದೆ ನೀರಿನ ಉದಾಹರಣೆಯಿಂದ ಇದನ್ನು ಹೇಳಿದೆ. ಆದ್ದದರಿಂದಲೇ ಅವು ಯಾದೃಚ್ಛಿಕ ಸಂಕೇತಗಳು ಮಾತ್ರ.

**4) ಅಂತರ್ ವಿನಿಮಯ ಕ್ಷಮತೆ**

ಒಂದು ಭಾಷೆಯನ್ನು ಬಳಸುವವರು ಆ ಭಾಷೆಯ ಚೌಕಟ್ಟಿನಲ್ಲಿಯೇ ಮಾತಿನ ಮೂಲಕ ಹೇಳುವುದರಿಂದಾಗಲಿ, ಕೇಳುವುದರಿಂದಾಗಲಿ ಸಂದೇಶ ರವಾನಿಸಬಲ್ಲರು. ತಿಳಿಯಬಲ್ಲರು. ಆದ್ದರಿಂದಲೇ ಒಂದು ಭಾಷಾ ಸಮೂದಾಯದಲ್ಲಿ ಒಡನಾಟ, ವ್ಯವಹಾರ ಭಾಷೆಯಿಂದ ಸಾಧ್ಯವಾಗುವುದು. ಇದರಿಂದ ಶ್ರಮದ ಹಂಚಿಕೆ ಮಾತ್ರವಲ್ಲ ಮಾನವ ಚಟುವಟಿಕೆಗಳ ವಿಕಾಸವೂ ಸಾರ್ಥವಾಗಿದೆ. ಒಂದು ಭಾಷೆಯನ್ನು ಅರ್ಥಮಾಡಿಕೊಳ್ಳುವುದು ಎಂದಾಗ ಎರಡು ಬಗೆಯ ಜ್ಞಾನ ಅಗತ್ಯ. ಒಂದು ಆಡುತ್ತಿರುವ ಅಥವಾ ಕೇಳುತ್ತಿರುವ ನಿರ್ಧಿಷ್ಟ ಭಾಷೆಯ ಭಾಷಾಜ್ಞಾನವಿರಬೇಕು, ಎರಡನೆಯದಾಗಿ ಪ್ರಾಪಂಚಿಕ ಜ್ಞಾನವು ಇರಬೇಕು. ಆಗ ಮಾತ್ರ ಆ ಭಾಷೆಯ ಮೂಲಕ ಸೂಚಿತವಾಗುವ ಅರ್ಥವೂ ತಿಳಿಯವುದು.

**5) ವಿಶಿಷ್ಟತೆ**

ಪ್ರತಿಭಾಷೆಯೂ ತನ್ನ ರಚನೆ ಮತ್ತು ಅರ್ಥಗಳ ಕಟ್ಟಿನಲ್ಲಿ ಸಂದೇಶಗಳನ್ನು ಅಭಿವ್ಯಕ್ತಗೊಳಿಸಲು ಸಮರ್ಥವಾದ ಒಂದು ವಿಶಷ್ಟ ಪದ್ಧತಿಯನ್ನು ಹೊಂದಿರುತ್ತದೆ. ಉಕ್ತವಾದ ಮಾತುಗಳಿಗೂ ಕ್ರಿಯೆಗಳಿಗೂ ಅರ್ಥಕ್ಕೂ ನೇರವಾದ ಭೌತಿಕ ಸಂಬಂಧವಿರುವುದಿಲ್ಲವಾದರೂ ರೂಢಿಯಿಂದ ಆ ವಿಶಿಷ್ಟ ಪದ್ದತಿಯ ಅರಿವಾಗಿರುತ್ತದೆ. ಆದ್ದರಿಂದ ಅರ್ಥ ಮಾಡಿ ಕೊಳ್ಳಲು ಸಾಧ್ಯವಾಗುತ್ತದೆ.

**6) ಪರ್ಯಾಯ ಬಳಕೆ**

ಉಲ್ಲೇಖಗೊಂಡ ವ್ಯಕ್ತಿ ವಸ್ತು ಸಂಗತಿ ನೇರವಾಗಿ ಎದುರಿಗಿದ್ದಾಗ ಮಾತ್ರವಲ್ಲದೆ ಪರ್ಯಾಯವಾಗಿಯೂ ಅವುಗಳನ್ನು ಸೂಚಿಸಲು ಭಾಷೆಯನ್ನು ಬಳಸಬಹುದು. ಹಿಮಪಾತ ಕಂಡಿಲ್ಲದಿರಬಹುದು. ವಿಜಯನಗರ ಸಾಮ್ರಾಜ್ಯದ ವಿಷಯ

ಗತಕಾಲಕ್ಕೆ ಸಂಬಂಧಿಸಿದ್ದು ಇಂತಹ ಸಂದರ್ಭಗಳಲ್ಲಿ ಕೇಳುವವರು ಆ ವ್ಯಕ್ತಿ. ವಸ್ತು ಸಂಗತಿ ಎದುರಿಗಿಲ್ಲದಿದ್ದರೂ ಕ್ರಿಯೆ ಕಾಣದಿದ್ದರೂ ಮಾತಿನ ಮೂಲಕ ಅರ್ಥ ಮಾಡಿಕೊಳ್ಳಬಲ್ಲರು.

7) ಸಾಂಸ್ಕೃತಿಕ ಪ್ರಸರಣ

ಭಾಷೆ ರಕ್ತಗತವಾಗಿ ಬರುವುದಿಲ್ಲ. ಆನುವಂಶಿಯತೆಯಿಂದ ಬರುವಂತಹುದಲ್ಲ. ಕಲಿಕೆಯಿಂದ ಮಾತ್ರ ಬರುವಂತಹದು ಎಂಬುದನ್ನು ಹಿಂದೆಯೇ ಹೇಳಲಾಗಿದೆ. ಹೀಗೆ ಅನುಕರಣೆಯಿಂದ ಭೌಷೆಯ ಮೂಲತ: ಕಲಿತಜ್ಞಾನವನ್ನು ಮಾತಿನ ಮೂಲಕ ಪ್ರಸರಿಸುತ್ತೇವೆ. ಜ್ಞಾನ ಸಂಚಿತವಾಗುವುದು. ಈ ಬಗೆಯ ನಿರಂತರ ಪ್ರಸರಣದಿಂದ ಜಗತ್ತಿನ ವಸ್ತು ಸಂಗತಿಗಳ ಜ್ಞಾನ, ಜೀವನಾನುಭವ ಬೆಳೆಯುವುದು ಈ ಬಗೆಯ ಸಂಚಿತವಾದ ಜ್ಞಾನ ಪ್ರಸರಣದಿಂದ ಭಾಷೆ ಅದಕ್ಕೆ ಮೂಲವಾಗುತ್ತದೆ.

ಈ ಲಕ್ಷಣಗಳು ಮನುಷ್ಯಭಾಷೆಗೆ ಮಾತ್ರ ಇರುವಂತಹ ಇವುಗಳಲ್ಲಿ ಒಂದೋ ಎರಡೋ ಲಕ್ಷಣಗಳು ಇತರ ಜೀವಿಗಳ ಭಾಷೆಗಳಿಗೆ ಇರಬಹುದು. ಉದಾ: ಧ್ವನಿಸಂಕೇತ ವಿನಿಮಯ ಆದರೆ ಮನುಷ್ಯಭಾಷೆಯ ಎಲ್ಲ ಲಕ್ಷಣಗಳು ಯಾವುದೇ ಮನುಷ್ಯೇತರ ಜೀವಿಯ ಭಾಷೆಗೆ ಇಲ್ಲ. ಹೀಗೆ ಭಾಷೆ ಮನುಷ್ಯನ ಬದುಕಿನ ಅನಿವಾರ್ಯವಾದ ಅವಿಭಾಜ್ಯವಾದ ಭಾಗವಾಗಿದೆ. ಅದು ಸಮಾಜದ ಸಂಸ್ಕೃತಿಯ ಹಾಗೂ ಮನುಷ್ಯನ ಸಕಲ ಚಿಂತನೆಗೂ ವ್ಯವಹಾರಕ್ಕೂ ಅಗತ್ಯವಾದ ಭಾಗವಾಗಿದೆ.

ಭಾಷಾ ವರ್ಗೀಕರಣ

ಪ್ರಪಂಚದಲ್ಲಿ ಇರುವ ಭಾಷೆಗಳಿಲ್ಲ. ಸ್ವತಂತ್ರವಾಗಿ ಜನಿಸದವರೆಲ್ಲ, ಭಾಷೆಗಳ ಜೊತೆಗೆ ಉಪ ಭಾಷೆಗಳೂ ಇವೆ. ಹಿಂದೆ ಇದ್ದ ಭಾಷೆ ಈಗ ಕಣ್ಮರೆಯಾಗಿವೆ. ಕೆಲವಕ್ಕೆ ಲಿಪಿಗಳಿವೆಲ, ಎಷ್ಟೋ ಭಾಷೆಗೆ ಲಿಪಿ ಇಲ್ಲದ ಕಾರಣ ಆಧಾರ ಸಾಮಾಗ್ರಿಗಳು ದೊರೆಯುವುದಿಲ್ಲ. ಭಾಷೆಗಳನ್ನು ವರ್ಗೀಕರಿಸುವಾಗ ಈ ಎಲ್ಲವನ್ನೂ ಗಮನಿಸಬೇಕಾಗುತ್ತದೆ. ಅಲ್ಲದೆ ವರ್ಗೀಕರಣದ ವಿಧಾನಗಳ ಬಗೆಗೆ ಚರ್ಚೆ ಇದೆ. ಯಾವ ವಿಧಾನ ಹೆಚ್ಚು ಸಮಂಜಸ ಉಪಯುಕ್ತ ಎಂಬ ಪ್ರಶ್ನೆಯೂ ಬರುತ್ತದೆ. ಭಾಷೆಗಳನ್ನು ಭೌಗೋಳಿಕ ಜನಾಂಗಿಕ, ರಾಚನಿಕವಾಂಶಿಕ ಎಂಬುದಾಗಿ ವರ್ಗೀಕರಿಸುವುದುಂಟು.

1) ಭೌಗೋಳಿಕ ವರ್ಗೀಕರಣ

ಪ್ರಪಂಚದ ಭಾಷೆಗಳನ್ನು ಆಯಾ ಭೌಗೋಳಿತ ಖಂಡಗಳ ಆಧಾರದ ಮೇಲೆ ವಿಂಗಡಿಸುವ ಕ್ರಮ ಇದಾಗಿದೆ. ಇದು ಬಹಳ ಸರಳ, ಸುಲಭ ಎನಿಸುತ್ತದೆ. ಯರೋಪಿನ ಭಾಷೆಗಳು ಭಾರತದ ಭಾಷೆಗಳು, ಉತ್ತರ ಅಮೇರಿಕಾದ ಭಾಷೆಗಳು ಅಪ್ರಿಕಾದ ಭಾಷೆಗಳು ಇತ್ಯಾದಿ. ಈ ವರ್ಗಿಕರಣದಿಂದ ಒಂದು ಭಾಷೆಯನ್ನು ಜನ ಎಲ್ಲಿ ಆಡುತ್ತಾರೆಂದು ತಿಳಿಯುತ್ತದೆಯೇ? ಹೊರೆತು ಆ ಭಾಷೆಯ ಸ್ವರೂಪ ಲಕ್ಷಣ ತಿಳಿಯುವುದಿಲ್ಲ. ಒಂದೇ ಭೂಖಂಡದಲ್ಲಿ ವಿವಿಧ ವರ್ಗದ ಭಾಷೆಗಳಿವೆ. ಭಾರತದ ಉತ್ತರ ಮತ್ತು ದಕ್ಷಿಣ ಭಾಷೆಗಳಿಗೆ ಸಂಬಂಧವಿಲ್ಲ. ಹಾಗೇ ಬಂಗಾಳಿ ಮತ್ತು ಕನ್ನಡ ಒಂದೇ ಅಲ್ಲ. ಹೀಗಾಗಿ ಈ ವಿಧಾನ ತರ್ಕಬದ್ಧವಲ್ಲ. ವೈಜ್ಞಾನಿಕವಲ್ಲ ಎನ್ನಬಹುದು.

**2) ಜನಾಂಗಿಕ ವರ್ಗೀಕರಣ**

ಜನಾಂಗದ ಆಧಾರದ ಮೇಲಿನ ವರ್ಗಿಕರಣ, ಇದೂ ಸಹ ಸಮರ್ಪಕ, ವೈಜ್ಞಾನಿಕವಲ್ಲ. ಪ್ರಪಂಚದ ಭಾಷೆಗಳನ್ನು ಮೂರು ಜನಾಂಗಿಕ ವರ್ಗಗಳಾಗಿ ವಿಂಗಡಿಸಿದರು. ಆರ್ಯನ್, ತುರೇನಿಯನ್, ಸೆಮಟೆಕ್ ಎಂದು ವಿಂಗಡಿಸಿದಾಗ ಆಫ್ರಿಕಾ ಕೈ ಬಿಟ್ಟು ಹೋಯಿತು. ಈ ವಿಂಗಡನೆಯ ತತ್ವವೆಂದರೆ ಪ್ರಪಂಚದ ಜನರೆಲ್ಲ ಮೂರು ನಾಲ್ಕು ಮೂಲ ಜನಾಂಗ ಇಲ್ಲವೆ ಪಂಗಡಕ್ಕೆ ಸೇರಿದವರು. ಅವರೇ ವಲಸೆ ಹೋಗಿ ಇತರ ಪ್ರದೇಶಗಳಲ್ಲಿ ಹರಡಿಕೊಂಡಿದ್ದಾರೆ. ಆದರೆ ಒಂದು ಜನಾಂಗದವರು ಒಂದೇ ಭಾಷೆಯಾಡುತ್ತಿದ್ದರು ಎಂದು ಹೇಗೆ ಹೇಳುವುದು? ಆರ್ಯವರ್ಗದ ಜನ ದಕ್ಷಿಣ ಭಾರತದಲ್ಲಿ ದ್ರಾವಿಡ ಭಾಷೆಗಳನ್ನು ಆಡುತ್ತಿದ್ದರು. ಕನ್ನಡ ಆರ್ಯ ಭಾಷೆಯಾಗಲು ಸಾಧ್ಯವಿಲ್ಲ. ಭಾಷೆ ಸಮಾಜಿಕ ಸಂಬಂಧವನ್ನು ಸೂಚಿಸುತ್ತದೆ.ಜನಾಂಗಿಕ ಸಂಬಂಧವನ್ನಲ್ಲ, ಮೂರು ಜನಾಂಗಿಗಳಾಗಿ ವಿಂಗಡಿಸಿದಾಗ ಆಫ್ರಿಕಾ ಮತ್ತು ಚೀನಾ ಜನಾಂಗಗಳ ಗತಿಯೇನು? ಪ್ರಾಚೀನ ಜನಾಂಗಗಳು ವಲಸೆ ಹೋದಂತೆ ಇಂದಿಗೂ ವಲಸೆ ಹೋಗುವ ಮನುಷ್ಯ ಪ್ರವೃತ್ತಿ ನಿಂತಿಲ್ಲ. ನೀಗ್ರೋ ಜನಾಂಗದವರು ಅಮೇರಿಕಾಕ್ಕೆ ಹೋದ ಮೇಲೆ ಇಂಗ್ಲೀಷ್ ಆಡುತ್ತಾರೆ. ಭಾರತಕ್ಕೆ ಬಂದ ಕೆಲವು ಜನಾಂಗ ಇಲ್ಲಿಯ ಭಾಷೆಯನ್ನೇ ಮಾತೃಭಾಷೆಯಾಗಿ ಸ್ವೀಕರಿಸಿದೆ. ಕೇರಳದ ಮುಸ್ಲಿಂ ಮತ್ತು ಕ್ರೈಸ್ತ ಮತದವರು ಮಾಲೆಯಾಳಂನ್ನು ಮಾತೃ ಭಾಷೆಯಾಗಿ ಸ್ವೀಕರಿಸಿದ್ದಾರೆ. ಜನಾಂಗಿಕ ವಿಂಗಡನೆ ಅಷ್ಟೆ ಸಮರ್ಥವಾಗಿಲ್ಲ. ಆದ್ದರಿಂದ ಭಾಷೆಯನ್ನು ಭಾಷೆಯ ರಚನೆಯ ಆಧಾರದ ಮೇಲೆ ವಿಂಗಡಿಸ ಬೇಕೆಂದು ಗಮನಾರ್ಹವಾಗುತ್ತದೆ.

**3) ರಾಚನಿಕ ವರ್ಗೀಕರಣ**

ಭಾಷೆಯನ್ನು ಅದರ ರಚನೆಯ ಅಂಶಗಳಾದ ಪದ ರಚನೆ, ವಾಕ್ಯ ರಚನೆಗಳ ಆಧಾರದ ಮೇಲೆ ವಿಂಗಡಿಸಬೇಕೆಂಬುದು ಆಧುನಿಕ ಭಾಷಾ ವಿಜ್ಞಾನಿಗಳ ಅಭಿಪ್ರಾಯ, ಆಗ ಎರಡು ಬಗೆಯ ವರ್ಗೀಕರಣ ಸಾಧ್ಯವಾಗುತ್ತದೆ. ಒಂದು ರಾಚನಿಕ ಎರಡು ವಂಶಿಕ ಭಾಷೆಯನ್ನು ನಿತ್ಯಪರಿವರ್ತನ ಶೀಲ ಎಂದು ಕರೆದರೂ ಆ ಪರಿವರ್ತನೆ ಪದಕೋಶದಲ್ಲಾಗುವುದೇ ಹೆಚ್ಚು. ಅದರ ವ್ಯಾಕರಣದಲ್ಲಿ ವ್ಯತ್ಯಾಸವಾಗುವುದಿಲ್ಲ.ಅಂದರೆ ಅದರ ಪದರಚನೆ, ವಾಕ್ಯ ರಚನೆ ಕ್ರಿಯಗಳು ಮಾರ್ಪಡುವುದು ಅಪರೂಪ. ಬೇರೆ ಭಾಷೆಯ ಪ್ರಭಾವವೂ ರಚನಾಕ್ರಮದ ಮೇಲೆ ಕಡಿಮೆ, ಇದರಿಂದ ಭಾಷೆಯ ಸ್ವರೂಪವೂ ತಿಳಿಯುತ್ತದೆ. ಈ ಸೂತ್ರದನ್ವಯ ಪ್ರಪಂಚದ ಭಾಷೆಗಳನ್ನು ಐದು ಗುಂಪುಗಳನ್ನಾಗಿ ವಿಂಗಡಿಸಿದ್ದಾರೆ.

**ಅ)ವಿವಿಕ್ತ ಭಾಷಾವರ್ಗ**

ಇದನ್ನು ಪ್ರತ್ಯೇಕ ಪದ ಭಾಷಾವರ್ಗ ಎಂದು ಹೇಳುತ್ತಾರೆ. ಇದು ಕೇವಲ ಶಬ್ದಗಳಿಂದ ಕೂಡಿದ್ದು, ಈ ವರ್ಗದ ಭಾಷೆಯಲ್ಲಿ ಏಕಾತ್ಮಕ ಶಬ್ದಗಳೇ ಹೆಚ್ಚು ಇಲ್ಲಿ ಪ್ರತಿ ಶಬ್ದಕ್ಕೂ ಅದು ಇರುವ ಸ್ಥಾನದಿಂದ ಬೇರೆ ಬೇರೆ ಅರ್ಥ ಬರುತ್ತದೆ. ಅಂದರೆ ವಾಕ್ಯ ಅರ್ಥವಾಗಲು ಪದಗಳಿಗೆ ಪ್ರತ್ಯಯಗಳ ಅಗತ್ಯವಿಲ್ಲ. ಸ್ಥಾನವೇ ಅರ್ಥವನ್ನು ಸೂಚಿಸುತ್ತದೆ. ಅಲ್ಲದೆ ಆ

ಕಾರಣದಿಂದಲೇ ನಾಮ ಪದ, ಕ್ರಿಯಾಪದ, ಗುಣವಾಚಕಗಳಿಗೆ ವ್ಯತ್ಯಾಸವಿರುವುದಿಲ್ಲ. ಒಂದು ಪದ ಒಂದು ಸ್ಥಾನದಲ್ಲಿ ನಾಮಪದವಾಗಿದ್ದು ಇನ್ನೊಂದುನ ಸ್ಥಾನದಲ್ಲಿದ್ದಾಗ ಕ್ರಿಯಾಪದವಾಗುತ್ತದೆ. ಉದಾ: ಚೀನಿ ಭಾಷೆಯಲ್ಲಿ ಏಕಾತ್ಮಕ ಶಬ್ದಗಳೇ ಇರುವುದು ಅಲ್ಲದೆ ಒಂದು ಪದವನ್ನು ಒಂದು ರೀತಿ ಸ್ವರಾಘಾತ ಕೊಟ್ಟ ಉಚ್ಚರಿಸಿದರೆ ಒಂದು ಅರ್ಥ ಇನ್ನೊಂದು ರೀತಿ ಆಘಾತ ಉಚ್ಚರಿಸಿದರೆ ಬೇರೆ ಅರ್ಥ ಬರುತ್ತದೆ. ಹೀಗೆ ವಿವಿಕ್ತ ಭಾಷೆಯ ಧ್ವನಿಯ ಅಘಾತ ಮತ್ತು ಶಬ್ದದ ಸ್ಥಾನ ಎರಡೂ ಮುಖ್ಯವಾಗುತ್ತವೆ. ಸೊಡಾನಿಕ್ ಮಲೆಯನ್ ಭಾಷೆಗಳು ಈ ವರ್ಗಕ್ಕೆ ಸೇರುತ್ತದೆ.

**ಆ) ಅಂಟು ಭಾಷಾ ವರ್ಗ**

ಈ ವರ್ಗದ ಭಾಷೆಗಳಲ್ಲಿ ಪ್ರಕೃತಿ ಮತ್ತು ಪ್ರತ್ಯಯ ಕೊಡಿ ಪದವಾಗುತ್ತದೆ. ಹಾಗೆ ಕೊಡಿದ ಅಥವಾ ಅಂಟದ ಎರಡನ್ನು ಗುರುತಿಸಬಹುದು, ಬಿಡಿಸಿತೋರಬಹುದು. ಇಲ್ಲಿ ಪ್ರತ್ಯಯಗಳ ಮೂಲಕವೇ ವಾಕ್ಯದಲ್ಲಿನ ಪದಗಳ ಸಂಬಂಧ ಅರ್ಥಸ್ಪಷ್ಟವಾಗುವುದು, ಈ ಪ್ರತ್ಯಯಗಳು ಒಂದು ಕಾಲಕ್ಕೆ ಸ್ವತಂತ್ರ್ಯ ಶಬ್ದಗಳಾಗಿದ್ದಿರಬಹುದು. ಅದ್ದರಿಂದ ಇಲ್ಲಿ ಪ್ರಕೃತಿ ಪ್ರತ್ಯಯಗಳರಡೂ ತಮ್ಮ ವಿಶಿಷ್ಟತೆಯನ್ನು ಉಳಿಸಿಕೊಂಡು ಪ್ರಧಾನವಾಗುತ್ತವೆ, ದ್ರಾವಿಡ ಭಾಷೆಗಳು ಇದಕ್ಕೆ ಉದಾಹರಣೆ, ಮನೆ, ಮನೆಗೆ ಮನೆಯೊಳಗೆ ಇತ್ಯಾದಿ, ಟರ್ಕಿಷ್ ಭಾಷೆಯೂ ಈ ಗುಂಪಿಗೆ ಸೇರುತ್ತದೆ.

**ಇ) ಪ್ರತ್ಯಯಿಕ ಭಾಷಾವರ್ಗ**

ಇಲ್ಲೂ ಸಹ ಪ್ರಕೃತಿ ಪತ್ಯಯಗಳು ಸೇರಿ ಪದವಾದರೂ ಅವೆರಡನ್ನು ಬಿಡಿಸಿ ತೋರಿಸಿವುದಕಷ್ಟೆ ಆಗಿರುತ್ತದೆ. ಪ್ರತ್ಯಯಗಳು ತಮ್ಮ ಮೂಲ ಸ್ವರೂಪವನ್ನು ಕಳೆದುಕೊಂಡಿರುತ್ತವೆ. ಗುರುತಿಸಲಾಗದ ಹಾಗಾಗಿರುತ್ತವೆ. ಇದನ್ನು ರಾಸಾಯನಿಕ ಮಿಶ್ರಣ ಎಂದೂ ಕರೆದಿದ್ದಾರೆ. ಈ ವರ್ಗಕ್ಕೆ ಇಂಡೋ ಯೂರೋಪಿಯನ್ ಭಾಷೆಗಳ ಸೆಮಾಟಿಕ್ ಭಾಷೆಗಳು ಉದಾಹರಣೆಯಾಗಿರುತ್ತವೆ. ಸಂಸ್ಕೃತ ಪದ ಇದೇ ಮಾರ್ಗದಲ್ಲಿ ಇವುಗಳಲ್ಲಿ ಪ್ರಕೃತಿ ಪ್ರತ್ಯಯಗಳನ್ನು ಬಿಡಿಸಿ ತೋರುವುದು ಕಷ್ಟ.

**ಈ) ಬಹುಪದಯುಕ್ತ ಭಾಷಾ ವರ್ಗ**

ಇಲ್ಲಿ ವಾಕ್ಯ ಒಂದು ಉದ್ದನೆಯ ಪದದಂತೆ ಇರುತ್ತದೆ. ಅಂದರೆ ವಾಕ್ಯದ ಕೆಲವು ಪದಗಳನ್ನು ತೆಗೆದು ಉಳಿದವರನ್ನು ಒಟ್ಟಾಗಿ ಕೂಡಿಸಿ ಒಂದು ಪದದಂತೆ ಹೇಳುವುದು. ಇಂತಹ ರಚನೆಗಳಲ್ಲಿ ಪದ ಹಾಗೂ ವಾಕ್ಯಗಳಿಗೆ ವ್ಯತ್ಯಾಸವೇ ಕಂಡುಬರುವುದಿಲ್ಲ. ಪ್ರಾತ್ಯಯಿಕ ವರ್ಗದ ಭಾಷೆಯಲ್ಲಿ ಪ್ರಕೃತಿ ಮಾತ್ರ ತನ್ನ ಸ್ವರೂಪ ಕಳೆದುಕೊಂಡು ಗುರುತಿಸಲಾಗದಂತೆ ಆಗುತ್ತದೆ. ಇಲ್ಲಾದರೂ ಪದಗಳು ಕೂಡಿದಾಗ ತಮ್ಮ ಮೂಲ ಸ್ವರೂಪ ಕಳೆದುಕೊಳ್ಳುತ್ತೇವೆ. ಉತ್ತರ ಅಮೇರಿಕದ ಮೂಲ ನಿವಾಸಿ ಭಾಷೆಗಳು ಈ ವರ್ಗಕ್ಕೆ ಸೇರುತ್ತವೆ.

ಉ) ಅಂತರ್ಗಮಕ ಭಾಷಾ ವರ್ಗ

ವಾಕ್ಯಗಳಲ್ಲಿ ಮಾರ್ಪಾಡಿಗೆ ಒಳಗಾಗದ ಸರ್ವನಾಮ ಅಥವಾ ಕ್ರಿಯಾಪದಗಳಿಗೆ ಉಳಿದ ಪದಗಳನ್ನು ಶಿಥಿಲವಾಗಿ ಜೋಡಿಸಿ ವಾಕ್ಯ ಮಾಡುವುದು. ಅಂದರೆ ಸರ್ವನಾಮ/ಕ್ರಿಯಾಪದವೇ ವಾಕ್ಯದ ಕೇಂದ್ರ. ಅದನ್ನೇ ಪೂರ್ಣ ವಾಕ್ಯವನ್ನಾಗಿಸುವ ಕ್ರಮ ಬಾಸ್ಕ್ ಭಾಷೆ ಇದಕ್ಕೆ ಉದಾಹರಣೆ.

ಭಾಷಾ ರಚನೆಯನ್ನು ಗಮನಿಸಿ ಮಾಡುವ ವೈಜ್ಞಾನಿಕ ಎನ್ನಬಹುದಾದ ಈ ವಿಂಗಡಣಾ ಕ್ರಮದಲ್ಲೂ ಎನ್ನಬಹುದಾದ ಕೊರತೆಗಳಿವೆ. ಸಂಬಂಧವೇ ಇಲ್ಲದೆ ಎರಡು ದೂರದ ಪ್ರದೇಶಗಳ ಭಾಷೆಗಳ ರಚನೆಯ ವಿನ್ಯಾಸ ಒಂದೇ ಬಗೆಯದಾಗಿದೆ ಎಂದಾಕ್ಷಣ ಆ ಎರಡನ್ನು ಒಂದೇ ವರ್ಗಕ್ಕೆ ಸೇರಿಸುವುದ ಎಷ್ಟೆ ಉಚಿತ. ಚೀನಿ ಭಾಷೆಯ ಒಂದೆರಡು ಲಕ್ಷಣಗಳು ಇಂಗ್ಲೀಷಿನಲ್ಲೂ ಕಾಣಸಿಗುತ್ತದೆ. ಚೀನಿ ಮತ್ತು ಇಂಗ್ಲೀಷ್ ಒಂದೇ ಗುಂಪಿನವಲ್ಲದಿದ್ದರೂ ರಾಚನಿಕ ದೃಷ್ಟಿಯಿಂದ ಒಂದೇ ವರ್ಗಕ್ಕೆ ಸೇರುತ್ತವೆ. ಅವೆರಡೂ ಭಿನ್ನ ವಂಶಕ್ಕೆ ಸೇರಿದ ಭಾಷೆಗಳು. ಈ ತೊಡಕಗಳನ್ನು ಗಮನಿಸಿ. ವಾಂಶಿಕ ವರ್ಗಿಕರಣವೇ ಉತ್ತಮವೆನ್ನುತ್ತಾರೆ.

## 4. ವಾಂಶಿಕ ವರ್ಗೀಕರಣ

ಅನೇಕ ಭಾಷೆಗಳು ಒಂದೇ ಮೂಲದಿಂದ ಕವಲಾಗಿ ಪ್ರತ್ಯೇಕ ಭಾಷೆಗಳಾಗಿರುತ್ತವೆ. ಒಂದು ಭಾಷಾ ಪ್ರದೇಶ ವಿಸ್ತಾರವಾಗಿದ್ದಾಗ ಬಾಹ್ಯ ಹಾಗೂ ಆಂತರಿಕ ಕಾರಣಗಳಿಂದ ಭಾಷಾ ಪ್ರಭೇದಗಳು ಉಂಟಾಗಿ ಕಾಲಕ್ರಮೇಣ ಅವು ಪ್ರತ್ಯೇಕ ಭಾಷೆಗಳಾಗಬಹುದು. ಹೀಗೆ ಪ್ರತ್ಯೇಕಗೊಂಡ ಭಾಷೆ ಮತ್ತು ಕಾಲಕಳದಂತೆ ಉಪ ಭಾಷೆಗಳಿಗೆ ಅವಕಾಶಕೊಡಬಹುದು. ಅಥವಾ ಒಂದು ಭಾಷೆಯನ್ನಾಡುವ ಜನ ಇನ್ನೊಂದು ಪ್ರದೇಶಕ್ಕೆ ಹೋಗಿ ನೆಲಸಿದಾಗ ಭಾಷಾ ವ್ಯತ್ಯಾಸ,ಮಾರ್ಪಾಡುಗಳು ಆಗಿ ಅದು ಪ್ರತ್ಯೇಕ ಭಾಷೆಯಾಗಬಹುದು. ಹೀಗೆ ಒಂದು ಮೂಲ ಭಾಷೆ ಎಷ್ಟೇ ಭಾಷೆಗಳಾಗಿ ಕವಲೊಡದರೂ ಕೆಲವೊಂದು ಸೋತ್ರಗಳನ್ನು ಅನುಸರಿಸಿ ಭಾಷೆಗಳ ಸೋದರ ಸಂಬಂಧವನ್ನು ಹಾಗೆ ಮೂಲ ಭಾಷೆಯನ್ನು ಗುರುತಿಸಬಹುದು. ಮನೆತನದ ವಂಶಾವಳಿಯನ್ನು ಗುರುತಿಸುವಂತೆ. ಒಂದು ಕಾಲಕ್ಕೆ ಕನ್ನಡ ಭಾಷೆ ಸಂಸ್ಕೃತದಿಂದ ಹುಟ್ಟಿದೆ ಎಂದು ವಿದ್ವಾಂಸರು ಹೇಳುತ್ತಿದ್ದರು. ಆದರೆ ಈಗ ಅದು ದ್ರಾವಿಡ ಭಾಷಾ ವರ್ಗಕ್ಕೆ ಸೇರಿದೆ ಎಂದು ಗುರುತಿಸಿದ್ದಾರೆ. ಮೂಲ ದ್ರಾವಿಡ ಇಂದು ಇಲ್ಲದಿದ್ದರೂ ಅದರ ಸೋದರ ಭಾಷೆಗಳಾದ ತಮಿಳು, ಕನ್ನಡ, ಮಲೆಯಾಳಂ, ತೆಲುಗು ಮೊದಲಾದವುಗಳಿಂದ ಮೂಲ ಭಾಷೆಯನ್ನು ಕಲ್ಪಿಸಿಕೊಳ್ಳಬಹುದು. ಪುನರ್ ರಚಿಸಬಹುದು.

ಭಾಷೆಗಳನ್ನು ವಂಶ ದೃಷ್ಟಿಯಿಂದ ಗುರುತಿಸಲು ಕೆಲವು ಕ್ರಮಗಳಿವೆ. ಬೇರೆ ಭಾಷೆಗಳ ಪ್ರಭಾವ ಎಷ್ಟೇ ಇದ್ದರೂ ಒಂದು ಭಾಷೆಯ ಮೂಲಭೂತ ಅವಶ್ಯಕ ಶಬ್ದಗಳು. ಆ ಭಾಷೆಯೇ ಆಗಿದ್ದು ಉಳಿದು ಬರುತ್ತವೆ. ಸಾಮಾನ್ಯವಾಗಿ ದೇಶದ ಅಂಗಗಳನ್ನು ಸೂಚಿಸುವ ಶಬ್ಬಗಳು. ಸಂಖ್ಯಾವಾಚಕ ಸಂಬಂಧಸೂಚಕ ಶಬ್ದಗಳು, ಸರ್ವನಾಮಗಳು, ಕ್ರಿಯಾಪದಗಳು,

ಆಹಾರವನ್ನು ಸೂಚಿಸುವ ಪದಗಳು ಉಳಿದು ಬರುತ್ತವೆ. ಹಾಗೇ ಸಾಂಸ್ಕೃತಿಕ ಮಹತ್ವದ ವಿಧಿಯಾಚರಣೆಯ ಶಬ್ದಗಳು ಉಳಿದು ಬರುತ್ತವೆ. ಬೇರೆ ಬೇರೆ ಭಾಷೆಗಳ ಇಂತಹ ಶಬ್ದಗಳನ್ನು ಹೋಲಿಸಿ ಸಾಮ್ಯವಿರುವ ಒಂದೇ ಬಗೆಯಾಗಿರುವ ಅಲ್ಪಸ್ವಲ್ಪ ವ್ಯತ್ಯಾಸವಿರುವ ಶಬ್ದಗಳುಳ್ಳ ಭಾಷೆಗಳನ್ನು ಒಂದೇ ವಂಶದವೆಂದು ಗುರುತಿಸಬಹುದು. ಇವುಗಳ ಜೊತೆಗೆ ಇನ್ನೂ ಖಚಿತ ಪಡಿಸಿಕೊಳ್ಳಲು ಧ್ವನಿಯ ಅನುರೂಪತೆ ಬದಲಾಗಿದ್ದರೆ ಯಾವ ಕ್ರಮದಲ್ಲಿ ಬದಲಾಗುತ್ತದೆ. ಕಾರಣ ಇತ್ಯಾದಿ ಗುರುತಿಸಬಹುದು. ಏಕೆಂದರೆ ನಿತ್ಯ ಬಳಕೆಯ ಶಬ್ದಗಳನ್ನು ಒಮ್ಮೊಮ್ಮೆ ಬೇರೆ ಭಾಷೆಯ ಪ್ರಭಾವದಿಂದ ಸ್ವೀಕರಿಸಿರಬಹುದು. ಸಾಂಸ್ಕೃತಿಕ, ಆಧ್ಯಾತ್ಮಿಕ, ವಿವಿಧ ಜ್ಞಾನ ಶಾಸ್ತ್ರಗಳಿಗೆ ಸಂಬಂಧಿಸಿದ ಶಬ್ದಗಳು ಸೇರುವುದಂತೂ ಸಾಮಾನ್ಯ, ಆಗ ಧ್ವನಿಗಳ ಪರಿಶೀಲನೆಯಿಂದ ಮತ್ತು ಖಚಿತ ನಿರ್ಣಯ ಸಾಧ್ಯವಾಗುತ್ತದೆ. ಕನ್ನಡದಲ್ಲಿ ಕ ಕಾರದಿಂದ ಆರಂಭವಾಗುವ ಶಬ್ದಗಳಲ್ಲಿ 'ಕ' ಮುಂದೆ 'ಇ' ' ಎ' ಸ್ವರ ಇದ್ದರೆ ತಮಿಳು ತೆಲುಗುಗಳಲ್ಲಿ ಚಿ/ಚೆ ಆಗುತ್ತದೆ. ಕನ್ನಡದಲ್ಲಿ ಕ ಕಾರವೇ ಉಳಿದಿರುತ್ತದೆ. ಉದಾ:- ಕಿವಿ-ಚೆವಿ. ಕಿರಿ-ಚಿರಿ, ಕೆದರು, ಚೆದರು, ಕೀವು - ಚೀ, ಚೀಕ - ಚೀಮು ಇತ್ಯಾದಿ ವಂಶ ನಿರ್ಧಾರದಲ್ಲಿ ಈ ಧ್ವನಿ ನಿಯಮಗಳೂ ಸಹಾಯಕವಾಗುತ್ತವೆ.

ಈ ಸೂತ್ರಗಳ ಪ್ರಕಾರ ಪ್ರಪಂಚದ ಭಾಷೆಗಳನ್ನು ಹಲವು ವಂಶಗಳಾಗಿ ಭಾಷಾ ವಿಜ್ಞಾನಿಗಳು ವರ್ಗೀಕರಿಸಿದ್ದಾರೆ. ಒಂದೊಂದು ಭಾಷಾವಂಶದಲ್ಲೂ ಮೂಲ ಭಾಷೆ ಅದರಿಂದ ಜನ್ಮವಾದ ಭಾಷೆಗಳು ಮತ್ತೆ ಕವಲಾದ ಭಾಷೆಗಳು ಹೀಗೆ ಗುಂಪುಗಳಾಗುತ್ತವೆ. ಮೂಲ ಭಾಷೆ ಇಂದು ಇರದಿದ್ದರೆ ಅದರಿಂದ ಹುಟ್ಟಿದ ಭಾಷೆಗಳು ಆ ಗುಂಪಿನಲ್ಲಿರುತ್ತವೆ.

ಇಂಡೋಯುರೋಪಿಯನ್ ಭಾಷಾ ವರ್ಗ, ಫಿನ್ನೋಉಗ್ರಿಕ್ ಭಾಷಾವರ್ಗ, ಅಲ್ಟೇಯಿಡ್ ಭಾಷಾವರ್ಗ, ಭಾಸ್ಕ್ ಭಾಷಾವರ್ಗ, ನೈಜರ್ - ಕಾಂಗೊಭಾಷಾವರ್ಗ, ಆಫ್ರೋ- ಏಶಿಯಾಟಿಕ್ ಭಾಷಾವರ್ಗ, ಸೈನೊ - ಟಿಬೆಟನ್ ಭಾಷಾ ವರ್ಗ, ದ್ರಾವಿಡ ಭಾಷಾವರ್ಗ, ಮಲಯಾ - ಪಾಲಿಸೀಷಿಯನ್ ಭಾಷಾವರ್ಗ ಅಸ್ಟ್ರೋ-ಏಷ್ಯಾಟಿಕ್ ಭಾಷಾ ವರ್ಗ, ಆಸ್ಟ್ರೇಲಿಯನ್ ಭಾಷಾ ವರ್ಗ, ಎಸ್ಕಿಮೊ - ಆಲೆಂಟ್ ಭಾಷಾವರ್ಗ, ಮುಂಡಾಭಾಷಾ ವರ್ಗ, ಇನ್ನು ಮುಂತಾದ ಭಾಷಾವಂಶಗಳಿವೆ.

'ಕ್ರಿ.ಪೂ. 4000 ವರ್ಷಗಳ ಹಿಂದೆ ಇದ್ದ ಸುಮೇರಿಯನ್ ಅತ್ಯಂತ ಪ್ರಾಚೀನ ಭಾಷೆ ಎಂದು ಕೆಲವರು. ಈಜಿಪ್ಟಿಯನ್ ಎಂದು ಹಳೆಯ ಚೀನಿ ಭಾಷೆ ಎಂದೂ ಬೇರೆ ಅಭಿಪ್ರಾಯಗಳಿವೆ. ಸಂಸ್ಕೃತ ಕ್ರಿ.ಪೂ. 3000 ಗ್ರೀಕ್ ಕ್ರಿ.ಪೂ. 800 ಲ್ಯಾಟಿನ್ ಕ್ರಿ.ಪೂ. 500 ವರ್ಷಗಳಷ್ಟೆ ಪ್ರಾಚೀನ ಪ್ರಪಂಚದ ಭಾಷೆಗಳನ್ನು 14 ಅಥವಾ 16 ಪರಿವಾರಗಳಾಗಿ ಥಾಮಸ್‌ಗ್ರೇ ಮತು ಹಂಬೋಲ್ಟ್ ವಿಂಗಡಿಸಿದರೆ ಪಾಬ್ರ್ರಿಡ್ಜ್ 10 ಪರಿವಾರವಾಗಿ ವಿಂಗಡಿಸಿದ್ದಾರೆ. ಅಮೇರಿಕಾದ ಇಂಡಿಯಾನ್ ವಿಶ್ವವಿದ್ಯಾಲಯದ ಮಾನವ ಶಾಸ್ತ್ರ ವಿಭಾಗದ ಒಂದು ಅಧ್ಯಯನದಲ್ಲಿ ಜಗತ್ತಿನಲ್ಲಿ ಸುಮಾರು ಹತ್ತು ಸಾವಿರ ಭಾಷೆ ಮ್ತು ಉಪಬಾಷೆಗಳಿವೆಯೆಂದು ಹೇಳಿ ಅವುಗಳನ್ನು ಒಟ್ಟು 7 ಭಾಷಾ ಪರಿವಾರಗಳಾಗಿ ವಿಂಗಡಿಸಲಾಗಿದೆ.

ವಾಂಶಿಕ ವರ್ಗೀಕರಣ ಭಾಷೆಗಳ ಸೋದರ ಸಂಬಂಧ ಹಾಗೂ ಮೂಲವನ್ನು ತಿಳಿಸುವುದಲ್ಲದೆ ಒಂದು ಭಾಷೆ ಆ ಜನರು ವಲಸೆ ಬಂದ ಕಾರಣ ದೂರ ಪ್ರದೇಶದಲ್ಲಿ ಬಳಕೆಯಲ್ಲಿದ್ದರೂ ಅವರು ವಲಸೆ ಹೊರಟ ಹೆಜ್ಜೆ ದಾರಿಗಳನ್ನು ತಿಳಿಸುತ್ತದೆ. ದಕ್ಷಿಣ ಭಾರತದಲ್ಲಿ ದ್ರಾವಿಡ ಭಾಷೆಗಳು ಈಗ ಪ್ರಚಲಿತವಿದ್ದರೂ ಬಲೂಚಿಸ್ತಾನದಲ್ಲಿರುವ ಬ್ರಾಹೊ ಈ ಭಾಷೆ ಹಿಂದೆ ದ್ರಾವಿಡರು

ಉತ್ತರದಲ್ಲೆಲ್ಲಾ ನೆಲಸಿದ್ದುದನ್ನು ಸೂಚಿಸುತ್ತದೆ. ದ್ರಾವಿಡ ಭಾಷಾ ವರ್ಗವನ್ನು ಉತ್ತರ ದ್ರಾವಿಡ ಮಧ್ಯ ದ್ರಾವಿಡ, ದಕ್ಷಿಣ ಮಧ್ಯದ್ರಾವಿಡ ಮತ್ತು ದಕ್ಷಿಣದ್ರಾವಿಡ ಎಂದು ವಿಂಗಡಿಸಿದೆ. ಇದು ಪ್ರದೇಶದ ಕಾರಣದಿಂದಲ್ಲ ಭಾಷೆಯ ಪರಸ್ಪರ ಹೋಲಿಕೆ ಸಂಬಂಧದ ದೃಷ್ಟಿಯಿಂದ ಈ ಕಾರಣದಿಂದ ವಾಂಶಿಕ ವರ್ಗೀಕರಣಕ್ಕೆ ಹೆಚ್ಚು ಮಾನ್ಯತೆ ದೊರೆತಿದೆ.

# ಅಧ್ಯಾಯ - ೨

# ಭಾರತೀಯ ಭಾಷೆಗಳು

1) ಇಂಡೋ ಆರ್ಯನ್ ಭಾಷಾ ಪರಿವಾರ

2) ದ್ರಾವಿಡ ಭಾಷಾ ಪರಿವಾರ

3) ಆಸ್ಟ್ರಿಕ್ ಭಾಷಾ ಪರಿವಾರ

4) ಟಿಬೆಟೋ ಬರ್ಮನ್ ಭಾಷಾ ಪರಿವಾರ

5) ಅವರ್ಗೀಕೃತ ಭಾಷಾ ಪರಿವಾರ.

ಇಂದು ಜಗತ್ತಿನಲ್ಲಿ ಹತ್ತು ಸಾವಿರಕ್ಕೂ ಹೆಚ್ಚು ಭಾಷೆ ಮತ್ತು ಉಪಭಾಷೆಗಳು ಬಳಕೆಯಲ್ಲಿರಬಹುದೆಂದು ಅಂದಾಜು ಮಾಡಿದ್ದಾರೆ. ಆದರೆ ಲೆಕ್ಕಕ್ಕೆ ಸಿಗದ ಇನ್ನೂ ಯಾರ ಗಮನಕ್ಕೂ ಬಾರದ ಅನೇಕ ಭಾಷೆ ಮತ್ತು ಉಪಭಾಷೆಗಳು ಜಗತ್ತಿನಲ್ಲಿರಬಹುದು. ಪ್ರಾಚೀನ ಕಾಲದಿಂದಲೂ ಜಗತ್ತಿನಾದ್ಯಂತ ಅನೇಕ ಭಾಷೆಗಳು ಬಳಕೆಯಲ್ಲಿದ್ದವು ಎಂಬುದಕ್ಕೆ ಕೆಲವು ಆಧಾರಗಳು ದೊರೆತಿವೆ. ಗ್ರಂಥಗಳು, ಶಿಲಾಶಾಸನಗಳು ತಾಮ್ರ ಪತ್ರಗಳು ಈ ಪ್ರಾಚೀನಕಾಲದ ಆಧಾರಗಳಿಂದ ಕೆಲವು ಭಾಷೆಗಳ ಹೆಸರುಗಳು ದೊರೆಯುತ್ತವೆ.

ಮಾನವ ಕುಲಕ್ಕೆಲ್ಲಾ ಮೊಟ್ಟಮೊದಲು ಒಂದೇ ಒಂದು ಭಾಷೆ ಬಳಕೆಯಲ್ಲಿದ್ದಿತು. ಆ ಮೂಲ ಭಾಷೆಯಿಂದ ಇಂದು ಬಳಕೆಯಲ್ಲಿರುವ ಎಲ್ಲಾ ಭಾಷೆ ಮತ್ತು ಉಪಭಾಷೆಯಿಂದ ಬೆಳೆದುಬಂದಿವೆ. ಅವುಗಳ ಮೂಲದಲ್ಲಿದ್ದ ಭಾಷೆಯಾವುದು? ಎಂಬುದರ ಬಗ್ಗೆ ಯಾವುದನ್ನು ಖಚಿತವಾಗಿ ಹೇಳಲು ಬರುವುದಿಲ್ಲ. ಈ ದಿಕ್ಕಿನಲ್ಲಿ ಒಬ್ಬೊಬ್ಬರೂ ಒಂದೊಂದು ಭಾಷೆಯನ್ನು ಮೂಲಭಾಷೆ ಎನ್ನುವರು ಒಂದೇ ಮೂಲದಿಂದ ಹುಟ್ಟಿದ ಬಾಷೆಗಳಲ್ಲಿ ಒಂದಲ್ಲಾ ಒಂದು ಬಗೆಯ ಸಾಮ್ಯ ಇದ್ದೇ ಇರುತ್ತದೆ. ಇವುಗಳಲ್ಲಿ ಕೆಲವು ಭಾಷೆಗಳು ಸಾಮ್ಯ ಉಳಿಸಿಕೊಂಡಿರಬಹುದು. ಮತ್ತೆ ಕೆಲವು ಅಂತಹ ಸಾಮ್ಯವನ್ನು ಕಳೆದುಕೊಂಡಿರಬಹುದು.

ಇಂದು ಜಗತ್ತಿನಲ್ಲಿ ಬಳಕೆಯಲ್ಲಿರುವ ಭಾಷೆಗಳನ್ನು ಕೆಲವು ವಿದ್ವಾಂಸರು ಅವುಗಳ ದೇಶ, ಕಾಲ, ವಂಶ, ಧರ್ಮ, ಜನಾಂಗ, ಇತಿಹಾಸ ಮುಂತಾದವುಗಳನ್ನು ಆಧರಿಸಿ ನಾನಾ ರೀತಿಯಲ್ಲಿ ವರ್ಗೀಕರಿಸಿಕೊಳ್ಳಲು ಪ್ರಯತ್ನಿಸಿದರೆ, ಇನ್ನೂ ಕೆಲವರು ಅವುಗಳ ಸಾಹಿತ್ಯ, ವ್ಯಾಕರಣ, ಮುಂತಾದವುಗಳನ್ನು ಆಧರಿಸಿ ವರ್ಗೀಕರಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಈ ರೀತಿ ಭಾಷೆಗಳನ್ನು ವರ್ಗೀಕರಿಸಿಕೊಳ್ಳಲು ಯತ್ನಿಸಿದುದರಿಂದ ಭಾಷಾ ವರ್ಗೀಕರಣಕ್ಕೆ ಸಂಬಂಧಿಸಿದ ಹೊಸ ಹೊಸ ವಿಧಾನಗಳು ಹೊಸ ಹೊಸ ವಿಚಾರಗಳು ಹೊರಬರಲು ಸಾಧ್ಯವಾಯಿತು.

ಕೆಲವರು ಜಗತ್ತಿನ ಭಾಷೆಗಳನ್ನು ಮುಖ್ಯವಾಗಿ ಎಂಟು ಭಾಷಾ ಪರಿವಾರಗಳಲ್ಲಿ ವರ್ಗೀಕರಿಸಲು ಪ್ರಯತ್ನಿಸಿದ್ದಾರೆ. ಅವುಗಳೇಂದರೆ 1) ಇಂಡೋಯೋರೋಪಿಯನ್ ಭಾಷಾ ಪರಿವಾರ 2) ಅಸ್ಟ್ರೋಏಷಾಟ್ಯಿಕ್ ಭಾಷಾ ಪಿರವಾರ 3) ಸಿನೋಟಿಬೆಟಿಯನ್ ಭಾಷಾ ಪರಿವಾರ 4) ಅಮೇರಿಕನ್ ಭಾಷಾ ಪರಿವಾರ 5) ಆಫ್ರಿಕನ್ ಭಾಷಾ ಪರಿವಾರ 6) ದ್ರಾವಿಡ ಭಾಷಾ ಪರಿವಾರ 7) ಫಿನ್ನೋ ಉಗ್ರಿಕ್ ಭಾಷಾ ಪರಿವಾರ 8) ಅವರ್ಗೀಕೃತ ಭಾಷಾ ಪರಿವಾರ.

ಜಗತ್ತಿನ ಈ ಪ್ರಮುಖ ಭಾಷಾ ಪರಿವಾರಗಳಿಗೆ ಸಂಬಂಧಿಸಿದ ಭಾಷೆ ಮತ್ತು ಉಪ ಭಾಷೆಗಳನ್ನು ಸ್ಥೂಲವಾಗಿ ಪರಿಚಯ ಮಾಡಿಕೊಡುವ ಪ್ರಯತ್ನ ಮಾಡಲಾಗಿದೆ.

# ಭಾರತೀಯ ಭಾಷೆಗಳು

ಭಾರತ ಬಹು ಭಾಷೆಗಳ ದೇಶ, ಸುಮಾರು ಒಂದು ಸಾವಿರದ ಎಂಟುನೂರಕ್ಕೂ ಹೆಚ್ಚು ಭಾಷೆ ಮತ್ತು ಉಪಭಾಷೆಗಳು ಇಲ್ಲಿವೆ. ಜಾತ್ಯತೀತ ರಾಷ್ಟ್ರವಾದ ಭಾರತದಲ್ಲಿ ಬೇರೆ ಬೇರೆ ಜನಾಂಗ, ಸಂಸ್ಕೃತಿ, ಜಾತಿ, ಧರ್ಮ, ಸಮಾಜಕ್ಕೆ ಸಂಬಂಧಿಸಿದ ಸುಮಾರು ತೊಂಬತ್ತು ಕೋಟಿಗೂ ಹೆಚ್ಚು ಜನರಿದ್ದಾರೆ, ಅವರೆಲ್ಲ ತಮ್ಮ ಪರಿಸರಕ್ಕೆ ತಕ್ಕಂತೆಅನೇಕ ಭಾಷೆಗಳನ್ನಾಡುತ್ತಿದ್ದಾರೆ, ಭಾರತಾದ್ಯಂತ ಕಂಡು ಬರುವ ಎಲ್ಲಾ ಭಾಷೆ ಮತ್ತು ಉಪಭಾಷೆಗಳನ್ನು ಅವುಗಳ ಬರಹವನ್ನು ಆಧರಿಸಿ ಬರಹದ ಭಾಷೆಗಳು ಮತ್ತು ಆಡು ಭಾಷೆಗಳು ಎಂದು ಎರಡು ವರ್ಗಗಳಲ್ಲಿ ವರ್ಗೀಕರಿಸಿಕೊಳ್ಳಬಹುದಾಗಿದೆ. ಇವುಗಳಲ್ಲಿ ಕೆಲವು ಸಂಪದ್ಭರಿತ ಭಾಷೆಗಳಾಗಿ ಕಂಡು ಬಂದರೆ ಇನ್ನು ಕೆಲವು ತುಂಬ ಹಿಂದುಳಿದ ಆದಿವಾಸಿ ಜನರು ಆಡುವ ಭಾಷೆಗಳಾಗಿ ಕಂಡು ಬರುತ್ತವೆ. ಹೀಗೆ ಕಂಡುಬರುವ ಭಾರತದ ಎಲ್ಲಾ ಭಾಷೆ ಮತ್ತು ಉಪ ಭಾಷೆಗಳನ್ನು ಅವುಗಳ ಆಂತರಿಕ ಸಂಬಂಧವನ್ನು ಆಧರಿಸಿ ಬೇರೆ ಬೇರೆ ಪರಿವಾರ, ಉಪಪರಿವಾರ ಶಾಖೆ, ಉಪಶಾಖೆ, ವರ್ಗ, ಉಪವರ್ಗಗಳಲ್ಲಿ ವರ್ಗೀಕರಿಸಿ ತೋರಿಸಬಹುದಾಗಿದೆ.

ಭಾರತೀಯ ಭಾಷೆಗಳನ್ನು ಬಹು ಹಿಂದಿನ ಕಾಲದಿಂದಲೂ ಬೇರೆ ಬೇರೆ ವಿದ್ವಾಂಸರು ನಾನಾ ರೀತಿಯಲ್ಲಿ ವರ್ಗೀಕರಿಸಿಕೊಳ್ಳುತ್ತಲೇ ಬಂದಿದ್ದಾರೆ, ಈ ವರ್ಗೀಕರಣವನ್ನು ಇಲ್ಲಿ ವೈಜ್ಞಾನಿಕವೂ, ಸಮರ್ಪಕವೂ ಸಮಗ್ರವೂ ಎಂದು ಒಪ್ಪಲಾಗದು, ಆಧುನಿಕ ಭಾಷಾ ವಿಜ್ಞಾನಿಗಳು ಭಾರತದಲ್ಲಿ ಬಳಕೆಯಲ್ಲಿರುವ ಎಲ್ಲಾ ಭಾಷೆ ಮತ್ತು ಉಪ ಭಾಷೆಗಳನ್ನು ಅವುಗಳ ಆಂತರಿಕ ಸಂಬಂಧವನ್ನು ಆಧರಿಸಿ ಇಂಡೋ ಆರ್ಯನ್ ಭಾಷಾ ಪರಿವಾರ, ದ್ರಾವಿಡಭಾಷಾ ಪರಿವಾರ, ಆಸ್ಟ್ರಿಕ್ ಭಾಷಾ ಪರಿವಾರ, ಟಿಬೆಟೋ ಬರ್ಮನ್ ಭಾಷಾ ಪರಿವಾರ ಎಂದು ನಾಲ್ಕು ಭಾಷಾ ಪರಿವಾರಗಳಲ್ಲಿ ವರ್ಗೀಕರಿಸಿ ಕೊಳ್ಳಬಹುದೆಂದು ಸೂಚಿಸಿದ್ದಾರೆ.

[7]ಕ್ರಿ.ಶ. 1883 ರಲ್ಲಿ ಗ್ರಿಯರ್‌ಸನ್, ಸ್ಟೆನೊವ್ ಎಂಬುವವರು ಭಾರತೀಯ ಭಾಷೆ ಮತ್ತು ಉಪಭಾಷೆಗಳ ಸರ್ವೇಕ್ಷಣಾ ಕಾರ್ಯವನ್ನು ಮೊಟ್ಟಮೊದಲು ಆರಂಭಿಸಿದರು. ಕಾರಣಾಂತರದಿಂದ 1906 ರ ಆನಂತರ ಈ ಕಾರ್ಯವನ್ನು ಗ್ರಿಯರ್‌ಸನ್ ಒಬ್ಬನೇ ಮುಂದುವರಿಸಿದನು, ಇಡೀ ಭಾರತದ ಭಾಷೆಗಳ ಸರ್ವೇಕ್ಷಣಾ ಕಾರ್ಯ ಸುಮಾರು ಇಪ್ಪತ್ತು ವರ್ಷಗಳವರೆಗೆ ಮುಂದುವರಿದುದರ ಪರಿಣಾಮವಾಗಿ "ಲಿಂಗ್ವಿಸ್ಟಿಕ್ ಸರ್ವೇ ಆಫ್ ಇಂಡಿಯಾ" ಎಂಬ ಹೆಸರಿನ ಬೃಹತ್ ಗ್ರಂಥವು ಹನ್ನೊಂದು ಸಂಪುಟಗಳಲ್ಲಿ ಹೊರಬಂದಿತು. ಈ ಗ್ರಂಥದ ಕೊನೆಯ ಸಂಪುಟ ಭಾರತದ ಭಾಷೆ ಮತ್ತು ಉಪಭಾಷೆಗಳ ಅನುಬಂಧ ಮತ್ತು ಅನುಸೂಚಿಗಳಿಗೆ ಸಂಬಂಧಿಸಿದ್ದಾಗಿದೆ. ಇದರಲ್ಲಿ ಭಾರತೀಯ ಭಾಷೆಗಳನ್ನು ನಾನಾ ರೀತಿಯಲ್ಲಿ ವರ್ಗೀಕರಿಸಿಕೊಳ್ಳಲು ಪ್ರಯತ್ನಿಸಲಾಗಿದೆ, ಗ್ರಂಥವು ಭಾರತದ ಭಾಷೆಗಳ ಅಧ್ಯಯನ ಮಾಡುವವರಿಗೆ ಕೈಪಿಡಿಯಾಗಿದೆ. ಇದನ್ನು ಮೀರಿಸುವ ಇನ್ನೊಂದು ಗ್ರಂಥ ಭಾರತದಲ್ಲಿ ಇನ್ನೂ ಹೊರಬಂದಿಲ್ಲ, ಈ ಗ್ರಂಥವನ್ನು ಆಮೂಲಾಗ್ರವಾಗಿ ಪರಿಶೀಲಿಸಿದ

ಸುನೀತಿ ಕುಮಾರ ಚಟರ್ಜಿ, ತಾರಾಪೂರೆವಾಲ, ಸಿದ್ದೇಶ್ವರ ವರ್ಮ, ಉದಯನಾರಾಯಣ ತಿವಾರಿ, ಸುಕುಮಾರ ಸೇನ್ ಬಾಬುರಾಮ ಸಕ್ಸೇನ ಮುಂತಾದವರು ಭಾರತೀಯ ಭಾಷೆಗಳ ಸರ್ವೇಕ್ಷಣಾ ಕಾರ್ಯದ ಇತಿಮಿತಿಗಳನ್ನು ಪಟ್ಟಿಮಾಡಿದ್ದಾರೆ. ಇದರೊಂದಿಗೆ ಭಾರತದ ಬೇರೆ ಬೇರೆ ಭಾಷೆ ಮತ್ತು ಉಪಬಾಷೆಗಳನ್ನು ಕುರಿತು ಚರ್ಚಿಸಿದ್ದಾರೆ. ಇದರಿಂದ ಹೊಸ ಹೊಸ ಭಾಷೆ ಮತ್ತು ಉಪಭಾಷೆಗಳ ವಿವರಣಾತ್ಮಕ ಐತಿಹಾಸಿಕ, ತೌಲನಿಕ ಅಧ್ಯಯನಕ್ಕೆ ದಾರಿಯಾಯಿತು. ಭಾರತೀಯ ಭಾಷೆಗಳ ವರ್ಗೀಕರಣಕ್ಕೆ ನೆರವಾಗುವ ಹೊಸ ಹೊಸ ತತ್ವಗಳು ಹೊರಬಂದವು.

## ಇಂಡೋ ಆರ್ಯನ್ ಭಾಷಾ ಪರಿವಾರ

ಭಾರತದಲ್ಲಿ ಇಂಡೋ ಆರ್ಯನ್ ಭಾಷಾ ಪರಿವಾರವೇ ಬಹು ದೊಡ್ಡ ಭಾಷಾ ಪರಿವಾರ, ಇದರಲ್ಲಿ ಸುಮಾರು ಎಂಟು ನೂರಕ್ಕೂ ಹೆಚ್ಚಿನ ಭಾಷೆ ಮತ್ತು ಉಪಭಾಷೆಗಳು ಸೇರಿವೆ, ಈ ಭಾಷೆಗಳು ಭಾರತದ ಮುಕ್ಕಾಲು ಭಾಗ ಪ್ರದೇಶದಲ್ಲಿ ವ್ಯಾಪಿಸಿಕೊಂಡಿವೆ. ಸುಮಾರು ನಲವತ್ತು ಕೋಟಿಗೂ ಹೆಚ್ಚು ಜನರು ಈ ಭಾಷೆವರ್ಗದಲ್ಲಿದ್ದಾರೆ. ಇವರಲ್ಲಿ ಸುಮಾರು ಹದಿನೆಂಟು ಕೋಟಿಗೂ ಹೆಚ್ಚಿನ ಜನರು ಹಿಂದಿ ಭಾಷೆಯನ್ನು ಆಡುವವರಾಗಿದ್ದಾರೆ. ಈ ಕಾರಣದಿಂದಲೇ ಹಿಂದಿ ಭಾಷೆಯನ್ನು ರಾಷ್ಟ್ರ ಭಾಷೆಯನ್ನಾಗಿ ಮಾಡಲಾಗಿದೆ. ಇವು ಬಹು ವಿಶಾಲವಾದ ಕ್ಷೇತ್ರದಲ್ಲಿ ವ್ಯಾಪಿಸಿಕೊಂಡಿವೆಯಲ್ಲದೆ ಪರಸ್ಪರ ಒಂದೇ ಮೂಲಭಾಷೆಯಿಂದ ಹುಟ್ಟಿ ಬೆಳೆದುಬಂದ ಭಾಷೆಗಳಾಗಿವೆ. ಇವುಗಳನ್ನು ಐತಿಹಾಸಿಕವಾಗಿ ಪ್ರಾಚೀನ ಭಾರತೀಯ ಆರ್ಯಭಾಷೆಗಳು, ಮಧ್ಯಕಾಲೀನ ಆರ್ಯ ಭಾಷೆಗಳು, ಆಧುನಿಕ ಭಾರತೀಯ ಆರ್ಯಭಾಷೆಗಳು ಎಂದು ಮೂರು ವರ್ಗಗಳನ್ನು ವರ್ಗೀಕರಿಸಿಕೊಳ್ಳಬಹುದಾಗಿದೆ.

## ಪ್ರಾಚೀನ ಭಾರತೀಯ ಆರ್ಯ ಭಾಷೆಗಳು

ಇವುಗಳಲ್ಲಿ ವೇದ ಸಂಸ್ಕೃತ ಮತ್ತು ಲೌಕಿಕ ಸಂಸ್ಕೃತ ಬಹುಮುಖ್ಯವಾದ ಭಾಷೆಗಳು, ವೇದ ಸಂಸ್ಕೃತ ಭಾರತದಲ್ಲಿ ಹೆಚ್ಚು ಬಳಕೆಯಲ್ಲಿತ್ತು ಎಂಬುವುದಕ್ಕೆ ಅನೇಕ ಆಧಾರಗಳಿವೆ, ಪ್ರಾಚೀನ ಭಾರತದ ಸಕಲಶಾಸ್ತ್ರ ಮತ್ತು ಜ್ಞಾನ ಭಾಂಡಾರವನ್ನು ಇದು ಪ್ರತಿಬಿಂಬಿಸುತ್ತದೆ. ಇದರಿಂದ ವಿಕಾಸಗೊಂಡ ಮುಂದಿನ ಭಾಷೆ ಲೌಕಿಕ ಸಂಸ್ಕೃತ , ಈ ಎರಡು ಭಾಷೆಗಳಲ್ಲಿಯೂ ಉತ್ತರೀ, ಮಧ್ಯದೇಶೀ, ಪೂರ್ವೀ, ಮತ್ತು ದಕ್ಷಿಣೀ ಎಂಬ ನಾಲ್ಕು ರೂಪಗಳು ಬಳಕೆಯಲ್ಲಿದ್ದವು, ಮತ್ತು ದಕ್ಷಿಣೀ ಎಂಬ ನಾಲ್ಕು ರೂಪಗಳು ಬಳಕೆಯಲ್ಲಿದ್ದವು. ಸಂಸ್ಕೃತ ಆಗಿನಕಾಲದ ರಾಷ್ಟ್ರಭಾಷೆ, ರಾಜ್ಯಭಾಷೆ, ಸಾಹಿತ್ಯಿಕ ಭಾಷೆಯಾಗಿ, ಬಳಕೆಯಲ್ಲಿದ್ದವು ಎಂಬುದಕ್ಕೆ ಅನೇಕ ಆಧಾರಗಳಿವೆ.

## ಮಧ್ಯಕಾಲೀನ ಭಾರತೀಯ ಆರ್ಯ ಭಾಷೆಗಳು

ಇವುಗಳಲ್ಲಿ ಪಾಳಿ, ಪ್ರಾಕೃತ, ಅಪಭ್ರಂಗ ಭಾಷೆಗಳು ಬಹಳ ಮುಖ್ಯವಾಗಿವೆ. ಸಂಸ್ಕೃತದಿಂದ ಕ್ರಮವಾಗಿ ಈ ಭಾಷೆಗಳು ಹುಟ್ಟಿಕೊಂಡಿವೆ. ಇವು ಮೊದಲು ಆಡುಭಾಷೆಯಾಗಿ ನಂತರ ಸಾಹಿತ್ಯಕ್ಕೆ ಬಳಸಿಕೊಳ್ಳಲಾಗಿದೆ. ಬೌದ್ಧಮತದವರು ಪಾಳಿ ಭಾಷೆ,

ಜೈನ ಮತದವರು ಪ್ರಾಕೃತ ಭಾಷೆ ಹಿಂದೂ ಮತದವರು ಸಂಸ್ಕೃತವನ್ನು ಮತಪ್ರಚಾರಕ್ಕೆ ಬಳಸಿಕೊಂಡ ಕಾರಣ ಇವು ಹೆಚ್ಚು ಪ್ರಚಾರಕ್ಕೆ ಬರಲು ಸಾಧ್ಯವಾಯಿತು.

## ಆಧುನಿಕ ಭಾರತೀಯ ಆರ್ಯಭಾಷೆಗಳು

ಭಾರತದಲ್ಲಿ ಇಂದು ಬಳಕೆಯಲ್ಲಿರುವ ಭಾಷೆ ಮತ್ತು ಉಪ ಭಾಷೆಗಳನ್ನೇ ಆಧುನಿಕ ಭಾರತೀಯ ಆರ್ಯಭಾಷೆಗಳು ಎಂದು ಕರೆಯುವರು, ಇವುಗಳನ್ನು ಹಾರ್ನೆಲ್ ಗ್ರಿಯರ್‌ಸನ್, ಸುನೀತಿಕುಮಾರ ಚಟರ್ಜಿ, ತಾರಾಪೊರೆವಾಲ, ಮುಂತಾದವರು ನಾನಾರೀತಿಯಲ್ಲಿ ವರ್ಗೀಕರಿಸಿಕೊಳ್ಳಲು ಪ್ರಯತ್ನಿಸಿದ್ದಾರೆ, ಆಧುನಿಕ ಭಾರತೀಯ ಆರ್ಯಭಾಷೆಗಳಲ್ಲಿ ಸಿಂದಿ, ಲಹಂದ, ಪಂಜಾಬಿ, ಗುಜರಾತಿ, ಪಶ್ಚಿಮೀಹಿಂದಿ, ಪೂರ್ವೀ ಹಿಂದಿ, ರಾಜಾಸ್ಥಾನಿ, ಬಿಹಾರಿ, ಉರಿಯ, ಅಸ್ಸಾಮಿ, ಬಂಗಾಳಿ, ಮರಾಠಿ, ಮುಂತಾದವು ಮುಖ್ಯವಾಗಿವೆ, ಇವು ಕ್ಷೇತ್ರ ಹಾಗೂ ಆಡುವವರ ಜನಸಂಖ್ಯೆಗಳಿಗೆ ತಕ್ಕಂತೆ ತಮ್ಮದೇ ಆದ ಅನೇಕ ಉಪ ಭಾಷೆಗಳನ್ನು ಸಂಪಾದಿಸಿಕೊಂಡಿವೆ. ಇವು ಮೂಲತಃ ಯಾವ ಮೂಲ ಭಾಷೆಗಳಿಂದ ಹುಟ್ಟಿಬೆಳೆದುಬಂದಿವೆ. ಎಂಬುದರ ಬಗ್ಗೆ ಯಾವುದು ಖಚಿತವಾಗಿ ಹೇಳಲು ಬರುವುದಿಲ್ಲ.

ಭಾರತಾದ್ಯಂತ ವ್ಯಾಪಿಸಿರುವ ಎಲ್ಲಾ ಆಧುನಿಕ ಆರ್ಯ ಭಾಷೆ ಮತ್ತು ಉಪಭಾಷೆಗಳನ್ನು ಅವುಗಳ ಭೂಗೋಲವನ್ನು ಆಧರಿಸಿ ಪೂರ್ವೀಭಾಷಾವರ್ಗ, ಪಶ್ಚಿಮೀಭಾಷಾವರ್ಗ, ಮಧ್ಯಭಾಷಾವರ್ಗ, ದಕ್ಷಿಣೀಭಾಷಾವರ್ಗ, ಉತ್ತರೀಭಾಷಾವರ್ಗ ಎಂದು ಐದು ಭಾಷಾವರ್ಗಗಳಾಗಿ ವರ್ಗೀಕರಿಸಲಾಗಿದೆ. ಈ ಪರಿವಾರಕ್ಕೆ ಸೇರಿದ ಭಾಷೆಗಲು ಮತ್ತು ಉಪಭಾಷೆಗಳು ಸಾಮಾನ್ಯವಾಗಿ ಹೆಚ್ಚು ಪ್ರಾಚೀನ ಭಾಷೆಗಳಾದ ವೇದಗಳ ಸಂಸ್ಕೃತ, ಲೌಕಿಕ, ಸಂಸ್ಕೃತ, ಪಾಳಿ, ಪ್ರಾಕೃತ, ಅಪಭ್ರಂಶ, ಅವೆಸ್ತ, ಹಳೆಯ ಪರ್ಷಿಯನ್, ಪಡಲವಿ ಮುಂತಾದ ಭಾಷೆಗಳನ್ನು ಹೆಚ್ಚು ಹೋಲುತ್ತವೆ. ಇವುಗಳಲ್ಲಿ ಆ ಬೇರೆ ಬೇರೆ ಭಾಷೆಗಳ ಅನೇಕ ಅಂಶಗಳು ಸೇರಿಕೊಂಡಿವೆ. ಇಷ್ಟಾದರೂ ಇಂಡೋ ಆರ್ಯನ್ ಭಾಷೆಗಳು ತಮ್ಮದೇ ಆದ ಕೆಲವು ವಿಸಿಷ್ಟ ಅಂಶಗಳನ್ನು ಉಳಿಸಿಕೊಂಡಿರುವ ಭಾಷೆಗಳಾಗಿವೆ.

## ದ್ರಾವಿಡ ಭಾಷಾ ಪರಿವಾರ

ಭಾರತದಲ್ಲಿ ಇಂಡೋ ಆರ್ಯನ್ ಭಾಷಾ ಪರಿವಾರವನ್ನು ಬಿಟ್ಟರೆ ಎರಡನೆಯ ದೊಡ್ಡ ಭಾಷಾ ಪರಿವಾರವೇ ದ್ರಾವಿಡ ಭಾಷಾ ಪರಿವಾರ, ಈ ಪರಿವಾರಕ್ಕೆ ಸೇರಿದ ಭಾಷೆ ಮತ್ತು ಉಪಭಾಷೆಗಳು ನೇಪಾಳದಿಂದ ಹಿಡಿದು ಕನ್ಯಾಕುಮಾರಿಯವರೆಗೆ ಪಾಕಿಸ್ತಾನದಿಂದ ಹಿಡಿದು ಪಶ್ಚಿಮ ಬಂಗಾಳದವರೆಗೆ ವ್ಯಾಪಿಸಿಕೊಂಡಿವೆ. ಈ ದ್ರಾವಿಡ ಭಾಷೆಗಳನ್ನು ಭಾರತದಲ್ಲಿ ಸುಮಾರು ಹದಿನೆಂಟು ಕೋಟಿಗೂ ಹೆಚ್ಚು ಜನರು ಆಡುತ್ತಿದ್ದಾರೆ.

ದ್ರಾವಿಡ ಭಾಷಾ ಪರಿವಾರಕ್ಕೆ ಸೇರಿದ ಭಾಷೆಗಳಲ್ಲಿ ಕರ್ನಾಟಕ ರಾಜ್ಯದ ಕನ್ನಡ, ತಮಿಳುನಾಡಿನ ತಮಿಳು, ಆಂಧ್ರ ಪ್ರದೇಶದ ತೆಲುಗು, ಕೇರಳದ ಮಲೆಯಾಳಂ ಭಾಷೆಗಳು ಬಹುಮುಖ್ಯವಾದ ಭಾಷೆಗಳಾಗಿವೆ, ಇವು ಹೆಚ್ಚು ಪ್ರಾಚೀನ ಭಾಷೆ

ಮಾತ್ರವಲ್ಲದೆ ಉತ್ತಮ ಸಾಹಿತ್ಯವನ್ನು ಹೊಂದಿವೆ. ಇವುಗಳ ಜೊತೆಗೆ ಅನೇಕ ಉಪಭಾಷೆಗಳು ಇವೆ, ಕನ್ನಡ, ತೆಲುಗು, ತಮಿಳು,ಮಲೆಯಾಳಂ ಭಾಷೆಗಳು ತಮ್ಮದೇ ಆದ ಲಿಪಿ ಸೌಲಭ್ಯವನ್ನು ಹೊಂದಿವೆ. ಉಳಿದೆಲ್ಲ ದ್ರಾವಿಡ ಭಾಷೆಗಳು ಲಿಪಿಯಿಲ್ಲದ ಆಡು ಭಾಷೆಗಳಾಗಿ ಬಳಕೆಯಲ್ಲಿವೆ.

ಭಾರತಾದ್ಯಂತ ಹರಡಿಕೊಂಡಿರುವ ದ್ರಾವಿಡಭಾಷೆಗಳನ್ನು ಅಧ್ಯಯನದ ದೃಷ್ಟಿಯಿಂದ ಸಾಹಿತ್ಯಿಕ ಭಾಷೆಗಳು, ಆಡು ಭಾಷೆಗಳು, ಗ್ರಾಂಥಿಕಭಾಷೆಗಳು, ನಿರ್ಗ್ರಾಂಥಿಕ ಭಾಷೆಗಳು ಎಂದು ಹೆಸರಿಸಿಕೊಳ್ಳಬಹುದಾಗಿದೆ. ದ್ರಾವಿಡ ಭಾಷೆಗಳನ್ನು ಆಳವಾಗಿ ಪರಿಶೀಲಿಸಿ ವಿವೇಚಿಸಲು ಪ್ರಯತ್ನಿಸಿದ ಕೆಲವು ವಿದ್ವಾಂಸರು ತಮಿಳು, ಕನ್ನಡ, ತೆಲುಗು, ಮಲೆಯಾಲಂ ಭಾಷೆಗಳನ್ನು ಲಿಪಿಯುಕ್ತ ಭಾಷೆಗಳು, ಬರಹದ ಭಾಷೆಗಳು, ಸಾಹಿತ್ಯಿಕ ಭಾಷೆಗಳು, ಗ್ರಾಂಥಿಕ ಭಾಷೆಗಳು ಎಂದು ಕರೆದುಕೊಂಡರೆ ಉಳಿದೆಲ್ಲಾ ದ್ರಾವಿಡ ಭಾಷೆಗಳನ್ನು ಲಿಪಿರಹಿತಭಾಷೆಗಳು, ಆಡುಭಾಷೆಗಳು, ನಿರ್ಗ್ರಾಂಥಿಕ ಭಾಷೆಗಳು,ಅಸಾಂಸ್ಕೃತಿಕ ಭಾಷೆಗಳು ಎಂದು ಕರೆಯುವರು. ದ್ರಾವಿಡ ಭಾಷೆಗಳಲ್ಲಿ ಆಡು ಭಾಷೆಗಳ ಸಂಖ್ಯೆಹೆಚ್ಚು ಬರಹದ ಭಾಷೆಗಳು ಕಡಿಮೆ, ಆಂತರಿಕ ಸಂಬಂಧವನ್ನು ಆಧರಿಸಿ ಭೌಗೋಳಿಕವಾಗಿ ಇವನ್ನು ದಕ್ಷಿಣ ದ್ರಾವಿಡ ಭಾಷೆಗಲು, ಮಧ್ಯದ್ರಾವಿಡ ಭಾಷೆಗಳು,ಉತ್ತರದ್ರಾನಿಡ ಭಾಷೆಗಳು ಎಂದು ಮೂರು ವರ್ಗಗಳಲ್ಲಿ ವರ್ಗೀಕರಿಸಿಕೊಳ್ಳಬಹುದಾಗಿದೆ.

ದ್ರಾವಿಡ ಎಂಬ ಶಬ್ದವು ಸಂಸ್ಕೃತದ ಬಹುಪ್ರಾಚೀನ ಸಾಹಿತ್ಯಿಕ ಗ್ರಂಥಗಳಲ್ಲಿ ದೊರೆಯುವುದು. ಮಹಾಭಾರತ, ಬೃಹತ್ ಸಂಹಿತೆ, ತಂತ್ರವಾರ್ತಿಕೆ ಮುಂತಾದ ಗ್ರಂಥಗಳಲ್ಲಿ ಈ ಶಬ್ದವನ್ನು ದೇಶಸೂಚಕ ಶಬ್ದವಾಗಿಯೂ ಜಾತಿ ಸೂಚಕವಾಗಿಯೂ, ಭಾಷಾ ಸೂಚಕವಾಗಿಯೂ ಬಳಸಿಕೊಳ್ಳಲಾಗಿದೆ. ಜಾತಿ, ಧರ್ಮ, ಸಮಾಜ,ಸಂಸ್ಕೃತಿ, ಜನಾಂಗ, ದೇಶ ಇತ್ಯಾದಿ ಅರ್ಥದಲ್ಲಿ ಈ ಶಬ್ದವ್ನು ಬಳಸಿಕೊಂಡಿರುವ ಅನೇಕ ಉದಾಹರಣೆಗಳಿವೆ. ಇದು ಭಾಷಾ ಸೂಚಕವಾಗಿ ಬಳಕೆಗೆ ಬಂದಿದ್ದು ಇತ್ತೀಚೆಗೆ ಮಾತ್ರ ಈ ದಿಕ್ಕಿನಲ್ಲಿಯೂ ವಿದ್ವಾಂಸರಲ್ಲಿ [8] ಸಾಕಷ್ಟು ಚರ್ಚೆಗಳು ನಡೆದಿವೆ. ಇನ್ನು ನಡೆಯುತ್ತಲೇ ಇವೆ. ಅಂತೂ ದ್ರಾವಿಡ ಎಂಬ ಶಬ್ದವು ಕ್ರಿ.ಪೂ. ಐದನೆಯ ಶತಮಾನಕ್ಕಿಂತಲೂ ಹೆದ ಜಾತಿ ಧರ್ಮ, ಸಮಾಜ, ಎಂಬ ಅರ್ಥದಲ್ಲಿ ಬಳಕೆಯಾಗಿರುವುದಕ್ಕೆ ಸಾಕಷ್ಟು ಆಧಾರಗಳು ದೊರೆಯುತ್ತವೆ, ದ್ರಾವಿಡಭಾಷೆಗಳನ್ನು ಆಡುವ ಜನರನ್ನು ದ್ರಾವಿಡರು ಎಂದು ಹೆಸರಿಸಿಕೊಂಡಿದ್ದಾರೆ, ದ್ರಾವಿಡರು ಯಾರು. ಇವರು ಭಾರತದ ಮೂಲ ನಿವಾಸಿಗಳೇ ಅಥವಾ ಆರ್ಯರಂತೆ ಇವರು ಹೊರಗಿನಿಂದ ಬಂದವರೆ ಇತ್ಯಾದಿ ಪ್ರಶ್ನೆಗಳಿಗೆ ಯಾರೂ ಖಚಿತವಾಗಿ ಉತ್ತರಿಸಲಾರರು, ದ್ರಾವಿಡರು ಆರ್ಯರಂತೆ ಹೊರಗಿನಿಂದ ಬಂದವರೇ ಆಗಿದ್ದರೆ ಅವರು ಯಾವ ಕಾಲದಲ್ಲಿ ಯಾವ ದೇಶಿದಿಂದ ಯಾವ ಮಾರ್ಗವಾಗಿ ಭಾರತಕ್ಕೆ ಬಂದರಬಹುದು ಎಂಬ ಪ್ರಶ್ನೆಎದುರಾಗುತ್ತದೆ, ಈ ದಿಸೆಯಲ್ಲಿಕೆಲವರು ದ್ರಾವಿಡರು ಆಪ್ರಿಕದಿಂದ ಬಂದಿರಬಹುದಂದೂ ಇಲ್ಲವೆ ಲುಮೂರಿಯ ದ್ವೀಪದಿಂದ ಬಂದಿರಬಹುದೆಂದೂ ಊಹಿಸಿದ್ದಾರೆ. ಇವರು ಹೊರಗಿನಿಂದ ಯಾವ ಮಾರ್ಗವಾಗಿ ಭಾರತಕ್ಕೆ ಬಂದರು. ಹಾಗೆ ಬಂದ ಅವರು ಭಾರತದ ಯಾವ ಭಾಗದಲ್ಲಿ ಮೊಟ್ಟಮೊದಲು ನೆಲೆಸಿದರು. ಅವರು ವಲಸೆಬರುವ ಮೊದಲು ಆಡುತ್ತಿದ್ದ ಭಾಷೆಯಾವುದು. ಇವರ ಜಾತಿ, ಜನಾಂಗ, ಸಮಾಜ, ಸಂಸ್ಕೃತಿ ಮುಂತಾದವು ಯಾವುವು ಇತ್ಯಾದಿ ಪ್ರಶ್ನೆಗಳು ಇನ್ನು ರಹಸ್ಯವಾಗಿಯೇ ಉಳಿದುಕೊಂಡಿವೆ. ಈ ದಿಕ್ಕಿನಲ್ಲಿ ಅಳವಾದ ಸಂಶೋಧನೆ ನಡೆಯಬೇಕಾಗಿದೆ.

ಬ್ರಾಹೊ ಈ ಭಾಷೆಯೂ ಸೇರಿದಂತೆ ಭಾರತಾದ್ಯಾಂತ ಹರಡಿಕೊಂಡಿರುವ ಎಲ್ಲಾ ದ್ರಾವಿಡ ಭಾಷೆಗಳು ಮೂಲತಃ ಒಂದೇ ತಾಯಿ ಭಾಷೆಯಿಂದ ಹುಟ್ಟಿ ಬೆಳೆದು ಬಂದ ಭಾಷೆಗಳು ಅವುಗಳ ಮೂಲ ಭಾಷೆ ಯಾವುದು ಎಂಬುದು ಇನ್ನು ಬಿಡಿಸಲಾಗದ ಪ್ರಶ್ನೆಯಾಗಿದೆ. ಇವುಗಳ ಮೂಲ ಭಾಷೆಯನ್ನು ಮೂಲ ದ್ರಾವಿಡ ಭಾಷೆ ಎಂದು ಕೆಲವರು ಹೆಸರಿಸಿಕೊಂಡಿದ್ದಾರೆ. ಅಷ್ಟೆ ಆ ಮೂಲ ದ್ರಾವಿಡ ಭಾಷೆಯು ಯಾವ ಕಾಲದಲ್ಲಿ ಯಾವ ಸ್ಥಳದಲ್ಲಿದ್ದಿತು. ಅದನ್ನು ಯಾವ ಜನ ಕಾಲದಲ್ಲಿ ಯಾವ ಸ್ಥಳದಲ್ಲಿದ್ದಿತು. ಅದನ್ನು ಯಾವ ಜನ ಆಡುತ್ತಿದ್ದರು ಎಂಬುದರ ಬಗ್ಗೆ ಯಾವ ಆಧಾರವೂ ದೊರೆಯುವುದಿಲ್ಲ. ದ್ರಾವಿಡ ಭಾಷಾ ಪರಿವಾರಕ್ಕೆ ಸೇರಿದ ಎಲ್ಲಾ ಭಾಷೆ ಹಾಗೂ ಉಪಭಾಷೆಗಳನ್ನು ಪರಸ್ಪರ ಹೋಲಿಸಿ ಪರಿಶೀಲಿಸಿದಾಗ ಅವುಗಳಲ್ಲಿ ಸಾಕಷ್ಟು ಸಾಮ್ಯಕಂಡುಬರುವುದು. ಇವು ಮೂಲತಃ ಒಂದೇ ಭಾಷೆಯಿಂದ ಕಾಲಕಾಲಕ್ಕೆ ಹುಟ್ಟಿ ಬೇರೆ ಬೇರೆಯಾಗಿ ಬೆಳೆದು ಬಂದ ಭಾಷೆಗಳ ಪ್ರಭಾವಕ್ಕೆ ಎಷ್ಟೇ ಒಳಗಾಗಿದ್ದರೂ ಅವು ತಮ್ಮದೇ ಆದ ಕೆಲವು ಮೂಲ ಲಕ್ಷಣಗಳನ್ನು ಉಳಿಸಿಕೊಂಡಿರುವ ಭಾಷೆಗಳಾಗಿವೆ.

ದ್ರಾವಿಡ ಭಾಷೆಗಳು ಸ್ವತಂತ್ರವಾದ ಮತ್ತು ಪ್ರತ್ಯೇಕವಾದ ಭಾಷೆಗಳೇ ಅಥವಾ ಜಗತ್ತಿನ ಬೇರೆ ಯಾವುದಾದರೂ ಭಾಷಾ ಪರಿವಾರಕ್ಕೆ ಸೇರಿದ ಭಾಷೆಗಳೇ ಎಂಬುದರ ಬಗ್ಗೆ ವಿದ್ವಾಂಸರಲ್ಲಿ ಸಾಕಷ್ಟು ಚರ್ಚೆಗಳು ನಡೆದಿವೆ. ಪೋಪ್ ಎಂಬ ವಿದ್ವಾಂಸನು ದ್ರಾವಿಡ ಭಾಷೆಗಳಿಗೂ ಕೆಲ್ಟಿಕ್ ಮತ್ತು ಟ್ಯುಟಾನಿಕ್ ಭಾಷೆಗಳಿಗೂ ಸಾಮ್ಯವಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದರೆ ರಾಸ್‌ಮಸ್‌ರಾಸ್ಕ್ ಎಂಬ ವಿದ್ವಾಂಸನು ದ್ರಾವಿಡ ಭಾಷೆಗಳಿಗೂ ಸಿಥಿಯನ್ ಭಾಷೆಗಳಿಗೂ ಸಾಮ್ಯವಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ, ಈ ಅಭಿಪ್ರಾಯಕ್ಕೆ ಬಂದನು. ಈ ರಾಸ್‌ಮಸ್‌ರಾಸ್ಕ್‌ನ ಅಭಿಪ್ರಾಯವನನು ಕಾಲ್ಡ್‌ವೆಲ್ ಮಹಾಶಯನು ಅನುಮೋದಿಸಿದ್ದಾನೆ. ಮತ್ತೆ ಕೆಲವರು ಭಾಷೆಗಳಿಗೂ ಪಶ್ಚಿಮ ಏಷ್ಯಾದ ಕೆಲವು ಭಾಷೆಗಳಿಗೂ ಸಂಬಂಧವಿದೆ. ಸಂಬಧವಿದೆ. ಎಂಬ ಅಭಿಪ್ರಾಯಗಳು ಸತ್ಯಕ್ಕೆ ದೂರವಾಗಿ ಉಳಿದುಕೊಂಡಿವೆ. ಕೆಲವು ಪ್ರಾಚೀನ ಸಂಸ್ಕೃತದ ಪಂಡಿತರು ಮತ್ತು ಕೆಲವು ಯೂರೋಪಿನ ವಿದ್ವಾಂಸರು ದ್ರಾವಿಡ ಭಾಷೆಗಳು ಸಂಸ್ಕೃತ ಜನ ಎಂಬ ತೀರ್ಮಾನಕ್ಕೆ ಬಂದಿದ್ದರು. ಇದು ಬಹಳ ಕಾಲ ಪ್ರಚಾರದಲ್ಲಿದ್ದಿತು. ದ್ರಾವಿಡ ಭಾಷೆಗಳು ಸಂಸ್ಕೃತ ಜನ್ಯವೆ ಅಥವಾ ಅಲ್ಲವೆ ಎಂಬುದನ್ನು ಆಳವಾಗಿ ಪರಿಶೀಲಿಸಿ ತಿಳಿಯಲು ಹೊರಟ ಕೆಲವು ವಿದ್ವಾಂಸರಲ್ಲಿ ಫ್ರಾನ್ಸಿಸ್‌ವೈಟ್ ಎಲ್ಲಿಸ್, ಕಿಟ್ಟೆಲ್, ಕಾಲ್ಡ್‌ವೆಲ್,ಬ್ರಾನ್, ಗುಂಡರ್ಟ್, ಬೆಸ್ಚಿ, ಗ್ರಿಯರ್‌ಸನ್ ಮುಂತಾದ ವಿದ್ವಾಂಸರು ಮುಖ್ಯರೆನಿಸಿಕೊಂಡಿದ್ದಾರೆ. ಇವರು ದ್ರಾವಿಡ ಭಾಷೆಗಳು ಸಂಸ್ಕೃತ ಜನ್ಯವಲ್ಲ ಎಂಬ ತೀರ್ಮಾನಕ್ಕೆ ಬಂದರು ಅಲ್ಲದೆ ದ್ರಾವಿಡ ಭಾಷೆಗಳ ಜಗತ್ತಿನ ಯಾವ ಭಾಷೆಗಳನ್ನು ಹೆಚ್ಚು ಹೋಲದ ಸ್ವತಂತ್ರವಾದ ಭಾಷೆಗಳು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಈ ಕಾರಣದಿಂದ ದ್ರಾವಿಡ ಭಾಷೆಗಳು ಸಿಥಿಯನ್ ಭಾಷೆಗಳನ್ನು ಹೋಲುತ್ತವೆ. ಎಂಬ ಕಾಲ್ಡ್‌ವೆಲ್‌ನ ಅಭಿಪ್ರಾಯ ಸತ್ಯಕ್ಕೆ ದೂವಾದ ವಿಚಾರವಾಗಿ ಉಳಿದುಕೊಂಡಿತು. ದ್ರಾವಿಡ ಭಾಷಾಪರಿವಾರದಲ್ಲಿ ನೂರಮೂವತ್ತಕಕ್ಕೂ ಹೆಚ್ಚು ಭಾಷೆಗಳು ಇರಬಹುದೆಂದು ಕೆಲವರ ಅಂದಾಜು ಇವುಗಳಲ್ಲಿ ಕೇವಲ ಇಪ್ಪತ್ತಾರು ಭಾಷೆಗಳು ಮಾತ್ರ ಹೊರಬಂದಿವೆ. ಇನ್ನೂ ಬೆಳಕಿಗೆ ಬಾರದ ಎಷ್ಟೋ ಭಾಷೆ ಮತ್ತು ಉಪಭಾಷೆಗಳು ಉಳಿದುಕೊಂಡಿವೆ. ಕನ್ನಡ, ತಮಿಳು, ತೆಲುಗು, ಮಲೆಯಾಳಂ ಭಾಷೆಗಳ ವಿವಿಧ ರಚನಾತ್ಮಕ ಅಂಶಗಳ ಅಧ್ಯಯನ ಸಾಕಷ್ಟು ನಡೆದಿದೆಯಾದರೂ ಉಳಿದ ದ್ರಾವಿಡ ಭಾಷೆಗಳ ವೈಜ್ಞಾನಿಕ ಅಧ್ಯಯನ ಅಷ್ಟಾಗಿ ನಡೆದಿಲ್ಲ. ಈ ಆದಿವಾಸಿ ಜನರು ಆಡುವ ಬೇರೆ ಬೇರೆ ಭಾಷೆಗಳ ಬಗ್ಗೆ ಯಾವ ಖಚಿತವಾದ ಆಧಾರಗಳು ದೊರೆಯುವುದಿಲ್ಲ. ಇದರಿಂದಾಗಿ ಆಡುಭಾಷೆಗಳ ಅಧ್ಯಯನ ಅಷ್ಟಾಗಿ ನಡೆಯಲು ಸಾಧ್ಯವಾಗಿಲ್ಲ.

ದ್ರಾವಿಡ ಭಾಷೆಗಳಲ್ಲಿ ಹಿಂದುಳಿದ ಬುಡಕಟ್ಟು ಜನರು ಆಡುವ ಭಾಷೆಗಳನ್ನು ಆಳವಾಗಿ ಅಭ್ಯಸಿಸಿದರೆ ಅದರಿಂದ ದ್ರಾವಿಡ ಜನಾಂಗ ಸಮಾಜ ಹಾಗೂ ಸಂಸ್ಕೃತಿಗೆ ಸಂಬಂಧಿಸಿದ ಕೆಲವು ಹೊಸ ಹೊಸ ವಿಚಾರಗಳು ಹೊರಬರಬಹುದೆಂದು ಆಶಿಸಬಹುದಾಗಿದೆ.

ದ್ರಾವಿಡ ಭಾಷೆಗಳನ್ನು ಜಾರ್ಜ್, ಎ. ಗ್ರಿಯರ್ ಸನ್, ಕಲ್ಡ್‌ವೆಲ್, ಮೊಲ್ಸ್‌ಬ್ಲಾಕ್, ಸುನೀತಿಕುಮಾರ ಚಟರ್ಜಿ, ಭ.ಕೃಷ್ಣಮೂರ್ತಿ, ಎಂ.ಬಿ. ಎಮೆನೂ.ಕಾಮಿಲ್‌ಜ್ವೆಲೆಬಿಲ್ ಮುಂತಾದವರು ನಾನಾರೀತಿಯಲ್ಲಿ ವರ್ಗೀಕರಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಈ ಬೇರೆ ಬೇರೆ ವಿದ್ವಾಂಸರ ವರ್ಗೀಕರಣವನ್ನು ಹೆಚ್ಚು ಸಮರ್ಪಕ ಹಾಗೂ ಸಮಗ್ರವೆಂದು ಹೇಳಲು ಬರುವುದಿಲ್ಲ. ಇವುಗಳಲ್ಲಿಯೂ ಸಾಕಷ್ಟು ಮತಭೇದಗಳಿವೆ. ಕಾಲ್ಡ್‌ವೆಲ್ ಮಹಾಶಯನು ವಾಸ್ತವವಾಗಿ ದ್ರಾವಿಡಭಾಷೆಗಳನ್ನು ವರ್ಗೀಕರಿಸಿಕೊಳ್ಳಲು ಪ್ರಯತ್ನಿಸಿಲ್ಲವಾದರೂ ಅವನು ದ್ರಾವಿಡಭಾಷೆಗಳನ್ನು ಅವುಗಳ ಆಂತರಿಕ ಸಂಬಂಧವನ್ನು ಆಧರಿಸಿ ಹೇಗೆ ವರ್ಗೀಕರಿಸಿಕೊಳ್ಳಬಹುದು ಎಂಬುದರತ್ತ ದಾರಿ ತೋರಿಸಿಕೊಟ್ಟದ್ದಾನೆ, ಇದನ್ನು ಗಮನಿಸಿದ ಗ್ರಿಯರ್ ಸನ್ ಅಂದು ದೊರೆತ ದ್ರಾವಿಡ ಭಾಷೆಗಳನ್ನು ಪ್ರಮುಖವಾಗಿ 5 ಭಾಗವಾಗಿ ವಿಂಗಡಿಸಿದ್ದಾನೆ. 1) [9]ಆಂಧ್ರವರ್ಗ (ತೆಲುಗು ಇತ್ಯಾದಿ) 2) ದ್ರಾವಿಡವರ್ಗ (ತಮಿಳು ಇತ್ಯಾದಿ) 3) ಮಧ್ಯವರ್ತಿ ವರ್ಗ (ಗೋಂಡಿ, ಮಲ್ತೊ, ಇತ್ಯಾದಿ) 4) ವಾಯವ್ಯ ವರ್ಗ (ಬ್ರಾಹೊಈ ಇತ್ಯಾದಿ) 5) ಆಂಧ್ರದ್ರಾವಿಡ ವರ್ಗ (ಭರಿಯ ಇತ್ಯಾದಿ) ಎಂದು ವರ್ಗೀಕರಿಸಿಕೊಳ್ಳಲು ಪ್ರಯತ್ನಿಸಿದ್ದಾನೆ. ಇವನು ಈ ಭಾಷಾ ವರ್ಗೀಕರಣಕ್ಕೆ ಭಾಷೆಗಳ ಸಾಮ್ಯವನ್ನಾಗಲಿ ಇತಿಹಾಸವನ್ನಾಗಲಿ ಅಥವಾ ವ್ಯಾಕರಣವನ್ನಾಗಲಿ ಗಮನಕ್ಕೆ ತೆಗೆದುಕೊಂಡಂತೆ ಕಂಡುಬರುವುದಿಲ್ಲ. ಇದನ್ನು ಗಮನಿಸಿದ ಸುನೀತಿಕುಮಾರ ಚಟರ್ಜಿಯವರು ದ್ರಾವಿಡ ಭಾಷೆಗಳನ್ನು ತಮ್ಮದೇ ಆದ ರೀತಿಯಲಲ್ಲಿ ವರ್ಗೀಕರಿಸಲು ಯತ್ನಿಸಿದರು. ಆದರೆ ಯಾವುದು ವೈಜ್ಞಾನಿಕವೆನಿಸಿಕೊಳ್ಳಲಿಲ್ಲ. ಎಂ.ಬಿ. ಎಮನೂ ಎಂಬುವವನು ಭೌಗೋಳಿಕ ಹಾಗೂ ಐತಿಹಾಸಿಕವಾಗಿ ದಕ್ಷಿಣದ್ರಾವಿಡ ಭಾಷೆಗಳು, ಮಧ್ಯದ್ರಾವಿಡ ಭಾಷೆಗಳು, ಉತ್ತರ ದ್ರಾವಿಡ ಭಾಷೆಗಳು, ಮಧ್ಯ ದ್ರಾವಿಡ ಭಾಷೆಗಳು, ಉತ್ತರ ದ್ರಾವಿಡ ಭಾಷೆಗಳು ಎಂದು ಮೂರು ವರ್ಗದಲ್ಲಿ ವಿವರಿಸಿದರು.

ಭ.ಕೃಷ್ಣಮೂರ್ತಿಯವರು ಈ ದ್ರಾವಿಡ ಭಾಷೆಗಳನ್ನು ವಾಂಶಿಕವಾಗಿ ಕಾಲ ಕ್ರಮಕ್ಕೆ ಅನುಗುಣವಾಗಿ ತಮ್ಮದೇ ಆದ ರೀತಿಯಲ್ಲಿ ವರ್ಗೀಕರಿಸಿಕೊಳ್ಳಲು ಪ್ರಯತ್ನಿಸಿದರು. ಈ ಕ್ರಮ ಹೆಚ್ಚು ಸಮರ್ಪಕ ಹಾಗೂ ಸಮಗ್ರವಾಗಿ ಕಾಣಿಸಿಕೊಳ್ಳುತ್ತದೆಯಾದರೂ ಇದರಲ್ಲಿ ಸಾಕಷ್ಟು ಕುಂದುಕೊರತೆಗಳು ಇಲ್ಲದೆ ಇಲ್ಲ. ಮೂಲ ದ್ರಾವಿಡದಿಂದ ಕಾಲಕ್ರಮೇಣ ಮೂಲ ದಕ್ಷಿಣ ದ್ರಾವಿಡ ಭಾಷೆಯೂ ಆನಂತರ ಮೂಲಮಧ್ಯದ್ರಾವಿಡ ಭಾಷೆಯೂ ತರುವಾಯ ಮೂಲ ಉತ್ತರ ದ್ರಾವಿಡಬಾಷೆಯೂ ವಿಕಾಸಗೊಂಡಿದೆ ಎಂದಿದ್ದಾನೆ. ದ್ರಾವಿಡ ಭಾಷೆಗಳು ಹೇಗೆ ಹುಟ್ಟಿ ಬೆಳೆದುಬಂದಿವೆ ಎಂಬುದರ ಬಗ್ಗೆ ಯಾವ ಆಧಾರಗಳೂ ದೊರೆಯುವುದಿಲ್ಲ. ಈ ದಿಕ್ಕಿನಲ್ಲಿ ಆಳವಾದ ಸಂಶೋಧನೆ ನಡೆಯದ ಹೊರತು ಅವುಗಳ ಮೂಲ ಭಾಷೆಗಳ ಬಗ್ಗೆ ಯಾವುದನ್ನು ಖಚಿತವಾಗಿ ಹೇಳಲು ಬರುವುದಿಲ್ಲ. ಮೂಲ ದ್ರಾವಿಡಭಾಷೆಯಿಂದ ಮೊಟ್ಟಮೊದಲು ಯಾವ ಭಾಷೆಹುಟ್ಟಿದೆ. ಆನಂತರ ಯಾವುದು ಎಂಬುದರ ಬಗೆ ವಿದ್ವಾಂಸರಲ್ಲಿ ಒಮ್ಮತವಿಲ್ಲ. ಆ ಮೂಲಭಾಷೆ ಜನ ಈಗ ಯಾರು ಇಲ್ಲ. ಇವು ಒಂದು ಕಾಲದಲ್ಲಿ ಬಳಕೆಯಲ್ಲಿದ್ದ ಭಾಷೆಗಳು, ಭಾರತದ ಯಾವ ಭಾಗದಲ್ಲಿ ಯಾವ ಕಾಲದಲ್ಲಿ ಬಳಕೆಯಲ್ಲಿದ್ದುವು. ಇದರಿಂದ ವಿಕಾಸಗೊಂಡಭಾಷೆಯಾವುವು. ಇತ್ಯಾದಿ ಪ್ರಶ್ನೆಗಳು ಹಾಗೆ ಇವೆ, ಕಾಮಿಲ್‌ಜ್ವೆಲೆ ಬಿಲ್‌ನು ಮೊದಲು ಮೂಲ ದಕ್ಷಿಣ ದ್ರಾವಿಡದಿಂದ ದಕ್ಷಿಣ ದ್ರಾವಿಡ ಭಾಷೆಗಳು, ಮೂಲ ಮಧ್ಯ ದ್ರಾವಿಡದಿಂದ ಮಧ್ಯದ್ರಾವಿಡಭಾಷೆಗಳು ಮೂಲ ಉತ್ತರ

ದ್ರಾವಿಕದಿಂದ ಉತ್ತರ ದ್ರಾವಿಡ ಭಾಷೆಗಳು ಬೆಳೆದು ಬಂದಿರಬಹುದೆಂದು ಅಭಿಪ್ರಾಯ ಪಟ್ಟಿದ್ದಾನೆ. ಹಾಗೆ ವಿಕಾಸಗೊಂಡ ಎಲ್ಲಾ ದ್ರಾವಿಡಬಾಷೆ ಮತ್ತು ಉಪಭಾಷೆಗಲು ಭಾರತದ ದಕ್ಷಿಣಭಾಗ, ಮಧ್ಯಭಾಗ, ಮತ್ತು ಉತ್ತರಭಾಗಗಳಲ್ಲಿ ವ್ಯಾಪಿಸಿಕೊಂಡಿವೆ.

ಇಂದು ದೊರೆಯುವ ಎಲ್ಲಾ ದ್ರಾವಿಡ ಭಾಷೆಗಳನ್ನು ಐತಿಹಾಸಿಕವಾಗಿ ಹಾಗೂ ಭೌಗೋಳಿಕವಾಗಿ ಮೇಲಿನಂತೆ ಮೂರು ವರ್ಗಗಳಲ್ಲಿ ವರ್ಗೀಕರಿಸಿಕೊಳ್ಳಬಹುದಾದರೂ ತೆಲುಗು ಭಾಷೆಯನ್ನು ದಕ್ಷಿಣ ದ್ರಾವಿಡಭಾಷೆ ಎನ್ನಬೇಕೆ ಅಥವಾ ಮಧ್ಯದ್ರಾವಿಡಭಾಷೆ ಎನ್ನಬೇಕೆ ಎನ್ನುವುದರ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ, ಕೆಲವರು ತೆಲುಗು ಭಾಷೆಯನ್ನು ದಕ್ಷಿಣದ್ರಾವಿಡ ಎಂದು ಪರಿಗಮಿಸಿಕೊಂಡರೆ ಮತ್ತೆ ಕೆಲವರು ಅದನ್ನೇ ಮಧ್ಯ ದ್ರಾವಿಡವೆಂದು ಪರಿಗಣಿಸಿಕೊಂಡಿದ್ದಾರೆ. ತೆಲುಗು ಕೆಲವು ಅಂಶಗಳಲ್ಲಿ ದಕ್ಷಿಣ ದ್ರಾವಿಡಭಾಷೆಗಳನ್ನು ಹೋಲುವುದು ಇದೇ ರೀತಿ ಕೊಡುಗು ಮತ್ತು ತುಳು ಭಾಷೆಗಳ ಸ್ಥಾನವೂ ಕೂಡ ಇನ್ನು ಸ್ಪಷ್ಟವಾಗಿಲ್ಲ. ಕೊಡಗು ಭಾಷೆಗಳು ನೇರವಾಗಿ ಮೂಲ ದ್ರಾವಿಡಭಾಷೆಯಿಂದಲೇ ಹುಟ್ಟಿಬೆಳೆದು ಬಂದಿರಬಹುದೆಂದು ಅಭಿಪ್ರಾಯ ವ್ಯಕ್ತಪಡಿಸಿದರೆ ಮತ್ತೆ ಕೆಲವರು ಇವು ಮೂಲ ದಕ್ಷಿಣ ದ್ರಾವಿಡಭಾಷೆಯಿಂದ ಬೇರೆ ಬೇರೆ ಕಾಲಗಳಲ್ಲಿ ಹುಟ್ಟಿ ಬೆಳೆದುಬಂದಿರಬಹುದೆಂದು ಭಾವಿಸಿದ್ದಾರೆ, ಹಾಗೆಯೇ ಕುಯಿ, ಕುವಿ ಮುಂತಾದ ಮಧ್ಯ ದ್ರಾವಿಡ ಭಾಷೆಗಳ ಸ್ಥಾನವೂ ಕೂಡ ಸ್ಪಷ್ಟವಾಗಿಲ್ಲ ಎನ್ನಬಹುದು.

ಅ) ದಕ್ಷಿಣ ದ್ರಾವಿಡ ಭಾಷೆಗಳು : ಭಾರತದ ದಕ್ಷಿಣಭಾಗದ ಬೇರೆ ಬೇರೆ ಭಾಗಗಳಲ್ಲಿ ಬಳಕೆಯಲ್ಲಿರುವ ದ್ರಾವಿಡ ಭಾಷೆಗಳನ್ನು ದಕ್ಷಿಣ ದ್ರಾವಿಡ ಭಾಷೆಗಳು ಎನ್ನುವರು, ಇವುಗಳಲ್ಲಿ ತಮಿಳು, ಮಲೆಯಾಳಂ, ಕೋತ, ತೊದ, ಇರುಳ, ಕನ್ನಡ, ಕೊಡಗು, ಬಡಗ, ಹವ್ಯಕ, ಸೋಲಿಗ, ಕುರುಬ, ತುಳು, ಬೆಲ್ಲಂ, ಕೊರಗ, ತೆಲುಗು ಪವಾರ, ಮನ್ನೆ ಮುಂತಾದ ಭಾಷೆಗಳು ಮುಖ್ಯವಾಗಿವೆ. ಈ ದಕ್ಷಿಣ ದ್ರಾವಿಡಭಾಷೆಗಳನ್ನು ಪರಸ್ಪರ ಹೋಲಿಸಿ ಪರಿಶೀಲಿಸಿದಾಗ ಅವುಗಳಲ್ಲಿ ಸಾಕಷ್ಟು ಸಾಮ್ಯ ಇರುವುದು ಕಂಡು ಬರುವುದು. ಇವುಗಳ ಆಂತರಿಕ ಸಂಬಂಧವನ್ನು ಆಧರಿಸಿ ಇವುಗಳನ್ನು ಮತ್ತೆ ತಮಿಳು, ಮಲೆಯಾಳಂ ಭಾಷಾವರ್ಗ, ಕನ್ನಡ ಭಾಷಾವರ್ಗ, ತುಳುಭಾಷಾ ವರ್ಗ, ತೆಲುಗುಭಾಷಾವರ್ಗ ಎಂದು ನಾಲ್ಕು ಉಪವರ್ಗಗಳಲ್ಲಿ ವರ್ಗೀಕರಿಸಿಕೊಳ್ಳಬಹುದಾಗಿದೆ.

## ಆ) ಮಧ್ಯದ್ರಾವಿಡ ಭಾಷೆಗಳು :

ಈ ಶಾಖೆಗೆ ಸೇರಿದ ಭಾಷೆಗಳು ಭಾರತದ ಒರಿಸ್ಸಾ, ಬಿಹಾರ, ಪಶ್ಚಿಮಬಂಗಾಳ, ಉತ್ತರ ಪ್ರದೇಶ, ಮಧ್ಯ ಪ್ರದೇಶ ಮಹಾರಾಷ್ಟ್ರ, ಅಸ್ಸಾಮ್ ಮುಂತಾದ ಕಡೆಗಳಲ್ಲಿ ಹರಡಿಕೊಂಡಿದೆ. ಭಾರತದ ಮಧ್ಯಭಾಗಗಳಲ್ಲಿ ಬಳಕೆಯಲ್ಲಿರುವ ಭಾಷೆಗಲನ್ನೇ ಮಧ್ಯ ದ್ರಾವಿಡ ಭಾಷೆಗಳು ಎನ್ನುವರು ಇವುಗಳಲ್ಲಿ ಕೊಲಾಮಿ, ನಾಯ್ಕಿ, ಪರ್ಜಿ, ಗದಬ, ಗೋಂಡಿ, ಕೊಂಡ, ಮಂಡ, ದೋರ್ಲಿ, ಪೆಂಗು, ಕೊಯ, ಪೊಯ, ಕುಮಿ, ಕುಯಿ, ಮುಂತಾದ ಭಾಷೆಗಳು ಮುಖ್ಯವಾಗಿವೆ. ಈ ಭಾಷೆಗಳಲ್ಲಿ ಸಾಕಷ್ಟು ಸಾಮ್ಯ ಕಂಡುಬರುವುದು. ಇವು ಯಾವುವೂ ಬರಹದ ಭಾಷೆಗಳಲ್ಲ. ಇವುಗಳಲ್ಲಿ ಯಾವ ಲಿಖಿತ ಸಾಹಿತ್ಯವು ದೊರೆಯುವುದಿಲ್ಲ. ಈ ವರ್ಗಕ್ಕೆ ಸೇರಿದ ಭಾಷೆಗಳನ್ನು ಮುಖ್ಯವಾಗಿ ಕೊಲಾಮಿ ಪರ್ಜಿಭಾಷಾವರ್ಗ, ಗೋಂಡಿಕೊಂಡ ಭಾಷಾವರ್ಗ, ಕುವಿ - ಕುಯಿ ಭಾಷಾವರ್ಗ ಎಂದು ಮೂರು ಉಪವರ್ಗಗಳಲ್ಲಿ ವರ್ಗೀಕರಿಸಿ ಕೊಳ್ಳಬಹುದಾಗಿದೆ. ಇವು ಮೂಲ ಮಧ್ಯ ದ್ರಾವಿಡದಿಂದ

ವಿಕಾಸಗೊಂಡ ಬೇರೆ ಬೇರೆ ಭಾಷೆಗಳಿರಬಹುದೆಂದು ಕೆಲವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

## ಇ) ಉತ್ತರ ದ್ರಾವಿಡ ಭಾಷೆಗಳು :

ಈ ವರ್ಗಕ್ಕೆ ಸೇರಿದ ಭಾಷೆಗಳಲ್ಲಿ ಕುರುಖ್, ಮಲ್ತೊ, ಧಾಂಗರ್, ಬ್ರಾಹೊ ಈ ಭಾಷೆಗಳು ಮುಖ್ಯವಾಗಿದೆ. ಇವು ಭಾರತದ ಉತ್ತರಭಾಗದಲ್ಲಿ ಕಂಡುಬರುವುದರಿಂದ ಇವನ್ನು ಉತ್ತರ ದ್ರಾವಿಡ ಭಾಷೆಗಳು ಎಂದು ಹೆಸರಿಸಿಕೊಳ್ಳಲಾಗಿದೆ. ಇವನ್ನು ಕುರುಖ್ ಮಲ್ತೊ ಭಾಷಾವರ್ಗ, ಬ್ರಾಹೊ ಈ ಭಾಷಾವರ್ಗ ಎಂದು ಎರಡು ಉಪವರ್ಗಗಳಲ್ಲಿ ವರ್ಗೀಕರಿಸಿಕೊಳ್ಳಬಹುದಾಗಿದೆ. ಇವು ಪರಸ್ಪರ ಒಂದನ್ನೊಂದು ಹೋಲುವ ಕಾರಣದಿಂದ ಇವು ಮೂಲ ದ್ರಾವಿಡ ಭಾಷೆ ಅಥವಾ ಮೂಲ ಉತ್ತರ ದ್ರಾವಿಡ ಭಾಷೆಯಿಂದ ಹುಟ್ಟಿ ಬೆಳೆದುಬಂದ ಭಾಷೆಗಳಿರಬಹುದೆಂದು ಭಾವಿಸಿದ್ದಾರೆ.

## ಆಸ್ಟ್ರಿಕ್ ಭಾಷಾ ಪರಿಹಾರ

ಈ ಪರಿವಾರಕ್ಕೆ ಸೇರಿದ ಭಾಷೆಗಳು ಭಾರತದ ಅಸ್ಸಾಮ್, ಉತ್ತರಪ್ರದೇಶತ, ಹಿಮಾಚಲ ಪ್ರದೇಶ, ಪಶ್ಚಿಮಬಂಗಾಳ, ಬಿಹಾರ, ಒರಿಸ್ಸಾ, ಆಂಧ್ರಪ್ರದೇಶ ಮುಂತಾದ ಕಡೆಗಳಲ್ಲಿ ವ್ಯಾಪಿಸಿಕೊಂಡಿವೆ. ಇವನನು ನಲವತ್ತು ಲಕ್ಷಕ್ಕೂ ಹೆಚ್ಚು ಜನರು ಆಡುತ್ತಿದ್ದಾರೆ. ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳಲ್ಲಿಯೂ ಕೂಡ ಸಾವಿರಾರು ಜನರು ಇವನ್ನು ಆಡುವವರಿದ್ದಾರೆ. ಈ ಭಾಷೆಗಳನ್ನು ಆಸ್ಟ್ರಿಕ್ ಭಾಷೆಗಳು ಎನ್ನುವರು ಈ ಭಾಷಾಪರಿವಾರವನ್ನು ಕೆಲವರು ಆಸ್ಟ್ರಿಕ್ ಭಾಷಾಪರಿವಾರ, ಆಗ್ನೀಯ ಭಾಷಾ ಪರಿವಾರ, ಆಸ್ಟ್ರೋಏಷ್ಯಾಟಿಕ್ ಭಾಷಾ ಪರಿವಾರ ಎಂತಲೂ ಕರೆಯುವರು.

ಆಸ್ಟ್ರೋ ಏಷ್ಯಾಟಿಕ್ ಭಾಷಾ ಪರಿವಾರದಲ್ಲಿ ಆಸ್ಟ್ರೋನೇಷಿಯನ್ ಭಾಷೆಗಳು, ಮಲೆಯೋಪಾಲನೇಫಿಯನ್ ಭಾಷೆಗಳು, ಆಸ್ಟ್ರಿಕ್ ಭಾಷೆಗಳು, ಆಸ್ಟ್ರೇಲಿಯನ್ ಭಾಷೆಗಳು, ಇಂಡೋನೇಷಿಯನ್ ಭಷೆಗಳು ಮುಂತಾದವು ಸೇರುತ್ತವೆ. ಭಾರತದಲ್ಲಿ ಆಸ್ಟ್ರಿಕ್ ಭಾಷೆಗಳಲ್ಲದೆ ಮತ್ತೆ ಈ ವರ್ಗಗಳಿಗೆ ಸೇರಿದ ಯಾವ ಭಾಷೆಗಳೂ ಬಳಕೆಯಲ್ಲಿಲ್ಲ. ಬರ್ಮ, ವಿಯತ್ನಾಮ್, ಥೈಲೆಂಡ್, ಕಾಂಬೋಡಿಯ ಮುಂತಾದ ಕಡೆಗಳಲ್ಲಿ ಮಾನ್ ಮ್ತು ಖೈರ್ ಭಾಷೆಗಳನ್ನು ಆಡುವ ಜನರಿದ್ದಾರೆ. ಇವು ಅಸ್ಟ್ರೋ ಏಷ್ಯಾಟಿಕ್ ಭಾಷೆಗಳಲ್ಲಿ ಹೆಚ್ಚು ಪ್ರಾಚೀನ ಇತಿಹಾಸವನ್ನು ಸಂಪಾದಿಸಿ ಕೊಂಡಿರುವ ಭಾಷೆಗಳು ಇವುಗಳಲ್ಲಿ ಉತ್ತಮ ಸಾಹಿತ್ಯ ಗ್ರಂಥಗಳು ದೊರೆಯುತ್ತವೆ. ಮಾನ್ ಮತ್ತು ಖೈರ್ ಭಾಷೆಗಲು ಪರಸ್ಪರ ಒಂದನ್ನೊಂದು ಹೋಲುತ್ತವೆ. ಏಳನೆಯ ಶತಮಾನದ ಖೈರ್ ಭಾಷೆಯ ಶಿಲಾಶಾಸನವೂ ಹನ್ನೊಂದನೆಯ ಶತಮಾನದ ಮಾನ್ ಭಾಷೆಯ ಶಿಲಾಶಾಸನವು ದೊರೆಯುವುವು. ಈ ಮಾನ್ ಮತ್ತು ಖೈರ್ ಭಾಷೆಗಳು ತಮ್ಮದೇ ಉಪಭಾಷೆಗಳನ್ನು ಸಂಪಾದಿಸಿಕೊಂಡಿವೆ ಒಂದು ಕಾಲದಲ್ಲಿ ಮಾನ್ ಮತ್ತು ಖೈರ್ ಭಾಷೆಗಳನ್ನು ಆಡುತ್ತಿದ್ದ ಜನರು ಇಂಡೋ ಚೀನವನ್ನು ಆಳುತ್ತಿದ್ದರು ಎಂಬುವುದಕ್ಕೆ ಸಾಕಷ್ಟು ಆಧಾರಗಳಿವೆ. ಈ ಭಾಷೆಗಳಲ್ಲಿ ಅರಬ್ಬಿ, ಸಂಸ್ಕೃತ, ಪ್ರಾಕೃತ ಭಾಷೆಗಳ ಪ್ರಭಾವವು ವಿಶೇಷವಾಗಿದೆ. ಕಾಂಬೋಡಿಯ, ಸಯಾಮ್, ವಿಯತ್ನಾಮ್, ಅನ್ನಾಮ್, ಬರ್ಮ ಕಡೆಗಳ್ಲಲಿ ಬಳಕೆಯಲ್ಲಿರುವ ಮಾನ್ ಮತ್ತು ಖೈರ್ ಭಾಷೆಗಳನ್ನು ಮಾಂಖ್ಮೆರ್ ಭಾಷಾವರ್ಗ ಎಂದು ಹೆಸರಿಸಿಕೊಳ್ಳಲಾಗಿದೆ ಬರ್ಮದ ಮಾನ್ ಕಾಂಬೋಡಿಯಾದ ಖ್ಮೆರ್ , ಇಂಡೋಚೀನದ ಚಮ್, ಮಲೇಷಿಯಾ ಮಲಯ ಮುಂತಾದ ಭಾಷೆಗಳು ಮುಖ್ಯವಾಗಿವೆ.

ಭಾರತದಲ್ಲಿ ಆಸ್ಟ್ರಿಕ್‌ಭಾಷಾವರ್ಗಕ್ಕೆ ಸೇರಿದ ಮುಂಡ, ಸಂತಾಲಿ, ಖಾಸಿಹೋ, ನಿಕೋಬಾರಿ ಮುಂತಾದ ಭಾಷೆಗಳು ಮಾತ್ರ ಬಳಕೆಯಲ್ಲಿವೆ. ಭಾರತದಲ್ಲಿ ಬಳಕೆಯಲ್ಲಿರುವ ಈ ಭಾಷೆಗಳನ್ನು ಅವುಗಳ ಆಂತರಿಕ ಸಂಬಂಧವನ್ನು ಆಧರಿಸಿ ಮುಂಡ ಭಾಷಾ ವರ್ಗ, ಖಾಸಿಭಾಷಾವರ್ಗ, ಹೋಭಾಷಾ ವರ್ಗ, ನಿಕೋಬಾರಿ ಭಾಷಾವರ್ಗ ಎಂದು ನಾಲ್ಕು ವರ್ಗಗಳಲ್ಲಿ ವರ್ಗೀಕರಿಸಿಕೊಳ್ಳಬಹುದಾಗಿದೆ. ಅಸ್ಸಾಮ್‌ನ ಗುಡ್ಡಗಾಡು ಪ್ರದೇಶಗಳಲ್ಲಿ ಖಾಸಿಭಾಷೆಗಳನ್ನು, ಅಂಡಮಾನ್ ನಿಕೋಬಾರ್ ದ್ವೀಪಗಳಲ್ಲಿ ನಿಕೋಬಾರಿ ಭಾಷೆಯನ್ನು, ಪಶ್ಚಿಮಬಂಗಾಳ, ಬಿಹಾರ, ಒರಿಸ್ಸಾ ಮಧ್ಯ ಪ್ರದೇಶ, ಹಿಮಾಚಲ ಪ್ರದೇಶ ಮಹಾರಾಷ್ಟ್ರ ಆಂಧ್ರ ಪ್ರದೇಶ ಮುಂತಾದ ಕಡೆಗಳ ಬೆಟ್ಟಗುಡ್ಡ ಪ್ರದೇಶಗಳಲ್ಲಿ ಕರ್ಮಲಿ, ಮಡಲ, ಮಂಜಿಕೆ, ಭೂಮಿಜ್, ಭಿರ್ಜಯ, ಜುಅಂಗ್, ಖರಿಯ, ಮುಂಡಾರಿ, ಪಂತಾಲಿ, ತುರಿ, ಅಸುರಿ, ಗದಬ, ಸವಾರ ಮುಂತಾದ ಭಾಷೆಗಳು ಬಳಕೆಯಲ್ಲಿವೆ.

**ಮುಂಡಾಭಾಷಾವರ್ಗ :**

ಈ ವರ್ಗಕ್ಕೆ ಸೇರಿದ ಭಾಷೆಗಳನ್ನು ಕೋಲ್‌ಭಾಷೆಗಳು, ಮುಂಡಾರಿ ಭಾಷೆಗಳು ಎಂತಲೂ ಕರೆಯುವರು [10] 1854 ರಲ್ಲಿ ಮ್ಯಾಕ್ಸ್‌ಮುಲ್ಲರ್ ಎಂಬುವವನು ಈ ಭಾಷೆಗಳನ್ನು ಮುಂಡಭಾಷೆಗಳು ಎಂದು ಕರೆದನು. ಈ ಹೆಸರೇ ಈಗಲೂ ಹೆಚ್ಚು ಪ್ರಚಾರದಲ್ಲಿದೆ. ಈ ಮುಂಡವರ್ಗಕ್ಕೆ ಸೇರಿದ ಭಾಷೆಗಳನ್ನು ಆಡುವ ಜನರನ್ನು ಕೆಲವರು ಕೋಲರು ಎಂದೂ ಆಸ್ಟ್ರಿಕ್ ಜನಾಂಗವೆಂದೂ, ಅಸ್ಟ್ರಲಾಯಿಡ್ಸ್‌ಗಳೆಂದೂ, ಮುಂಡಾರಿಗಳು ಎಂದು ಬೇರೆ ಬೇರೆ ಹೆಸರುಗಳಿಂದ ಕರೆಯುವರು. ಇದರಲ್ಲಿ ಕೋಲರು ಎಂಬ ಹೆಸರು ಹೆಚ್ಚು ಪ್ರಾಚೀನವಾದದ್ದು, ದ್ರಾವಿಡರಂತೆ ಕೋಲರುಕೂಡ ಹೊರಗಿನಿಂದ ಭಾರತಕ್ಕೆ ಬಂದವರಿರಬಹುದೆಂದು ಕೆಲವರ ಅಭಿಪ್ರಾಯ, ಗ್ರಿಯರ್‌ಸನ್ ಮಹಾಶಯನು ಮುಂಡಭಾಷೆ ಆಡುವವರನ್ನು ಮುಂಡಾರಿಗಳು ಎಂದೇ ಹೆಸರಿಕೊಂಡಿದ್ದಾನೆ. ಇವನು ತನ್ನ ಗ್ರಂಥದಲ್ಲಿ ಮುಂಡ, ಖರಿಯ, ಕುರ್ಕ್, ಜುಅಂಗ್, ಸವಾರ, ಗದಬ, ಕೊರವ, ಕೋತ, ಸಂತಾಲಿ, ಭೂಮಿಜ್, ಖಾಸಿ, ತುರಿ, ಅಸುರಿ, ಹೋ ಅಗರಿಯ, ಭಿರ್ಜಯ ಮುಂತಾದ ಭಾಷೆಗಳನ್ನು ಮುಂಡಭಾಷೆಗಳು ಎಂದಿದ್ದಾನೆ.

ಆರ್ಯರು ಭಾರತಕ್ಕೆ ಬಂದಾಗ ಭಾರತದಲ್ಲಿ ದ್ರಾವಿಡರು, ಕೋಲರು, ಎಂಬ ವರ್ಗಕ್ಕೆ ಸೇರಿದ ಜನರಿದ್ದರು ಆರ್ಯರು ಭಾರತಕ್ಕೆ ಬಂದ ನಂತರ ಬೇರೆ ಬೇರೆ ಕಾರಣಗಳಿಂದ ಈ ದ್ರಾವಿಡರು ಮತ್ತು ಕೋಲರು ಭಾರತದ ಬೇರೆ ಬೇರೆ ಪ್ರದೇಶಗಳಿಗೆ ಚದುರಿ ಹೋದರು. ಮುಂಡ ಭಾಷೆಗಳನ್ನು ಆಡುತ್ತಿದ್ದ ಮುಂಡಾರಿಗಳು ಅಥವಾ ಕೋಲರು ಯಾರು, ಯಾವ ಕಾಲದಲ್ಲಿ ಯಾವ ದೇಶದಿಂದ ಯಾವ ಮಾರ್ಗವಾಗಿ ಭಾರತಕ್ಕೆ ಬಂದರು ಎಂಬುವುದಕ್ಕೆ ಖಚಿತವಾದ ಆಧಾರಗಳಿಲ್ಲ, ದ್ರಾವಿಡ ಭಾಷೆಗಳ ಪ್ರಭಾವವು ಮುಂಡ ಭಾಷೆಯ ಮೇಲೆ ಉಂಟಾಗಿರುವುದನ್ನು ಸ್ಪಷ್ಟವಾಗಿ ಗುರುತಿಸಿಕೊಳ್ಳಬಹುದಾಗಿದೆ. ಸಂಖ್ಯಾವಾಚಕಗಳಲ್ಲಿನ ಸರಳತೆ, ಕ್ರಮಬದ್ಧತೆ, ಉತ್ತಮ ಪುರುಷ ಬಹುವಚನದಲ್ಲಿ ಸಮಾವೇಶಕ ಮತ್ತು ಅಸಮಾವೇಶಕ ಎಂಬ ರೂಪಗಳ ಬಳಕೆ, ಸಜೀವ, ನಿರ್ಜೀವ ಶಬ್ದಗಳ ವಿಭಜನೆ, ಕ್ರಿಯಾರೂಪಗಳಲ್ಲಿನ ಲಿಂಗವ್ಯವಸ್ಥೆ, ಕ್ರಿಯಾ ಪದಗಳಲ್ಲಿ ಕ್ಲಿಷ್ಟತೆ, ಕೃದಂತ ಮತ್ತು ವಿಶಿಷ್ಟ ಪದಪ್ರಯೋಗ ಮುಂತಾದವು ದ್ರಾವಿಡ ಭಾಷೆಗಳಿಗೆ ಮುಂಡ ಭಾಷೆಗಳ ಪ್ರಭಾವದಿಂದ ಬಂದಿರಬಹುದೆಂದು ಕೆಲವರ ಊಹೆ, ಮುಂಡಭಾಷೆಗಳಲ್ಲಿ ಇದೇ ರೀತಿ ಅನೇಕ ಆರ್ಯ ಅಂಶಗಳಿರುವುದು ಕಂಡು ಬರುತ್ತವೆ. ದ್ರಾವಿಡ ಭಾಷೆಗಳನ್ನು ಹೆಚ್ಚು ಹೋಲುವ

ಗದಬ, ಸವಾರ, ಕುರ್ಕ್, ಕೋತ, ಕೊರವ ಎಂಬ ಹೆಸರಿನ ಭಾಷೆಗಳು ಮುಂಡ ಭಾಷಾ ವರ್ಗಕ್ಕೆ ಸೇರಿದ ಭಾಷೆಗಳಲ್ಲಿಯೂ ಇವೆ. ಇವು ಆ ದ್ರಾವಿಡ ಭಾಷೆಗಿಂತ ಬೇರೆ. ಇವು ಕೆಲವು ಅಂಶಗಳಲ್ಲಿ ಮುಂಡ ಭಾಷೆಗಳನ್ನು ಹೋಲುತ್ತಿವೆಯಾದ ಕಾರಣದಿಂದ ಕೆಲವರು ದ್ರಾವಿಡ ಭಾಷೆಗಳನ್ನು ಆಸ್ಟ್ರಿಕ್ ಭಾಷಾ ವರ್ಗಕ್ಕೆ ಸೇರಿಸಲು ಪ್ರಯತ್ನಿಸಿ ವಿಫಲರಾದರು, ಒಂದೇ ಹೆಸರಿನ ಬೇರೆ ಬೇರೆ ಭಾಷೆಗಳು ದ್ರಾವಿಡ ಮತ್ತು ಮುಂಡ ಭಾಷೆಗಳಲ್ಲಿ ಕಂಡುಬರುತ್ತವೆಂಯಾದರೂ ಅವು ಬೇರೆ ಬೇರೆ ಭಾಷೆಗಳಾಗಿವೆ. ವಾನ್‌ಹವೆಸಿ ಎಂಬುವವನು ಮುಂಡ ಭಾಷೆಗಳು ಕೆಲವು ಅಂಶಗಳಲ್ಲಿ ಫಿನ್ನೋ ಉಗ್ರಿಕ್ ಭಾಷೆಗಳನ್ನು ಹೋಲುತ್ತವೆ ಎಂಬ ಅಭಿಪ್ರಾಯ ವ್ಯಕ್ತಪಡಿಸಿದನು. ಸ್ಮಿತ್ ಎಂಬ ವಿದ್ವಾಂಸರು ದ್ರಾವಿಡ ಮತ್ತು ಮುಂಡ ಭಾಷೆಗಳು ಇತರ ಭಾಷೆಗಳಂತೆ ಸ್ವತಂತ್ರ ಮತ್ತು ಪ್ರತ್ಯೇಕವಾದ ಭಾಷೆಗಳು ಎಂಬ ನಿರ್ಣಯಕ್ಕೆ ಬಂದನು ಇದನ್ನು ಗಮನಿಸಿದ ಕೆಲವರು ಕೋಲ್ ಅಥವಾ ಕೋಲರಿನ್ ಎಂದು ಕರೆಯಲಾಗುತ್ತಿದ್ದ ಮುಂಡಭಾಷೆಗಳನ್ನು ಮೊಂಖ್ಮೇರ್ ಅನ್ನಾಮೀಸ್, ಮುಅಂಗ್ ಭಾಷೆಗಳನ್ನು ಪರಸ್ಪರ ಹೋಲಿಸಿ ಅವು ಪರಸ್ಪರ ಒಂದೇ ಪರಿವಾರಕ್ಕೆ ಸೇರಿದ ಭಾಷೆಗಳು ಎಂದು ಭಾವಿಸಿ ಅವನ್ನು ಅಗ್ನೇಯ ಭಾಷೆಗಳು, ಆಸ್ಟ್ರಿಕ್ ಭಾಷೆಗಳು, ಅಸ್ಟ್ರೋಏಷ್ಯಾಟಿಕ್ ಭಾಷೆಗಳು ಎಂದು ಕರೆದುಕೊಂಡರು. ಮುಂಡಭಾಷೆ ತುರ್ಕಿ ಭಾಷೆಯನ್ನು ಹೆಚ್ಚು ಹೋಲುತ್ತದೆ. ಮುಂಡ ಸಂತಾಲಿ, ಕನ್ವಾಲಿ, ಮುಂತಾದ ಭಾಷೆಗಳಲ್ಲಿ ಆರ್ಯಭಾಷೆಗಳ ಪ್ರಭಾವವು ವಿಶೇಷವಾಗಿ ಕಂಡುಬರುವುದು. ಈ ಮುಂಡ ಭಾಷೆಗಳನ್ನು ಬೇರೆ ಬೇರೆ ಉಪ ವರ್ಗಗಳಲ್ಲಿ ವರ್ಗೀಕರಿಸಿಕೊಳ್ಳಬಹುದಾಗಿದೆ.

1) ಪಶ್ಚಿಮ ಮುಂಡ ಭಾಷಾ ವರ್ಗ 2) ಪೂರ್ವ ಮುಂಡಭಾಷಾ ವರ್ಗ 3) ಉತ್ತರ ಮುಂಡಭಾಷಾ ವರ್ಗ 4) ಮಧ್ಯಮುಂಡಭಾಷಾ ವರ್ಗ ಗಳೆಂದು ಉಪ ವರ್ಗೀಕರಿಸಿದ್ದಾರೆ.

**ಖಾಸಿಭಾಷಾವರ್ಗ :**

ಈ ಭಾಷೆಯನ್ನು ಪಿ.ಡಬ್ಲ್ಯೂ. ಸ್ಮಿಮಿಡ್ತ್ ಎಂಬ ವಿದ್ವಾಂಸ ಬೆಳಕಿಗೆ ತಂದನು. ಮೊದಲು ಕೋಲ್ ಅಥವಾ ಮೊಂಖ್ಮೇರ್ ಎಂದು ಕರೆದು ನಂತರ ಜಯಂತಿಯ ಖಾಸಿ, ನನ್ ತೆಂಗ್, ಸೇಯ್‌ತೆಂಗ್, ಮುಂತಾದವುಗಳನ್ನು ಗುರುತಿಸಿದ್ದಾರೆ.

**ಹೋಭಾಷಾವರ್ಗ :**

ಇದನ್ನು ಖೇರ್ವಾರಿ ಭಾಷಾವರ್ಗ ಎಂದು ಕೆಲವರು ಕರೆದಿದ್ದಾರೆ. ಇದರಲ್ಲಿ ಹೋ, ಕೊಡ, ಧಾರ್ ಭಾಷೆ ಮುಖ್ಯವಾಗಿವೆ.

**ನಿಕೋಬಾರಿ ಭಾಷಾ ವರ್ಗ :**

ಭಾರತದಲ್ಲಿ ಕಂಡುಬರುವ ಅಸ್ಟ್ರೋ ಏಷ್ಯಾಟಿಕ್ ಭಾಷೆಗಳನ್ನು ಮೇಲಿನಂತೆ ಮೂರು ವರ್ಗಗಳಲ್ಲಿ ವರ್ಗೀಕರಿಸಿಕೊಳ್ಳಬಹುದಾದರೂ ಅಂಡಮಾನ್ ನಿಕೋಬಾರ್ ದ್ವೀಪಗಳಲ್ಲಿ ಬಳಕೆಯಲ್ಲಿರುವ ನಿಕೋಬಾರಿ ಭಾಷೆಯು ಈ ಆಸ್ಟ್ರಿಕ್ ಭಾಷೆಗಳನ್ನು ಹೆಚ್ಚು ಹೋಲುವ ಕಾರಣದಿಂದ ಇದನ್ನು ಪ್ರತ್ಯೇಕವಾಗಿ ನಿಕೋಬಾರಿ ಭಾಷಾವರ್ಗ ಎಂದು ಹೆಸರಿಸಿಕೊಳ್ಳಲಾಗಿದೆ.

# ಟಿಬೆಟೋ ಬರ್ಮನ್ ಭಾಷಾ ಪರಿವಾರ

ಸಿನೋಟಿಬೆಟನ್ ಭಾಷಾ ಪರಿವಾರಕ್ಕೆ ಸೇರಿದ ಭಾಷೆ ಮತ್ತು ಉಪಭಾಷೆಗಳನ್ನು ಅವುಗಳ ಅಂತರಿಕ ಸಂಬಂಧವನ್ನು ಆಧರಿಸಿ ಐತಿಹಾಸಿಕ ಹಾಗೂ ಭೌಗೋಳಿಕವಾಗಿ ಟಿಬೆಟೋ ಬರ್ಮನ್ ಭಾಷೆಗಳು ಮತ್ತು ಟಿಬೆಟೋ ಚೈನಿಸ್ ಭಾಷೆಗಳು ಎಂದು ಎರಡು ವರ್ಗಗಳಲ್ಲಿ ವರ್ಗೀಕರಿಸಿಕೊಂಡಿದ್ದಾರೆ. ಈ ಟಿಬೆಟೋಬರ್ಮನ್ ಭಾಷೆಗಳನ್ನು ಮತ್ತೆ ಹಿಮಾಲಯನ್‌ಭಾಷಾವರ್ಗ, ಆಸ್ಸಾಮಿಭಾಷಾವರ್ಗ, ಬರ್ಮಿ ಭಾಷಾವರ್ಗ, ಕುಕಿಚಿನ್ ಭಾಷಾವರ್ಗ, ನಾಗಾಭಾಷಾವರ್ಗ ಎಂಬಿತ್ಯಾದಿಗಳಲ್ಲಿ ವರ್ಗೀಕರಿಸಿಕೊಂಡರೆ ಟಿಬೆಟೋ ಚೈನಿಸ್ ಭಾಷೆಗಳನ್ನು ಚೀನಿಭಾಷಾವರ್ಗ, ಸ್ಯಾಮಿಭಾಷಾವರ್ಗ, ಕಡ್ಯೆಭಾಷಾವರ್ಗ, ಟಿಬೆಟ್‌ಭಾಷಾವರ್ಗ ಎಂಬಿತ್ಯಾದಿಗಳಲ್ಲಿ ವರ್ಗೀಕರಿಸಿಕೊಳ್ಳುವರು. ಈ ಟಿಬೆಟೋ ಚೈನಿಸ್ ಭಾಷಾ ವರ್ಗಕ್ಕೆ ಸೇರಿದ ಭಾಷೆಗಳು ಭಾರತದಲ್ಲಿ ಹೆಚ್ಚು ಬಳಕೆಯಲಿಲ್ಲ. ಇವು ಬಳಕೆಯಲ್ಲಿದ್ದರೂ ಅವುಗಳಲ್ಲಿ ಆಡುವವರ ಸಂಖ್ಯೆ ಬಹಳ ಕಡಿಮೆ, ಭಾರತದ ಉತ್ತರ ಭಾಗದಲ್ಲಿ ಟಿಬೆಟೋ ಬರ್ಮನ್‌ಭಾಷೆಗಳು ಬಳಕೆಯಲ್ಲಿವೆ. ಈ ಭಾಷೆಗಳ ಪರಿವಾರವನ್ನು ಕೆಲವರು ಏಕಾಕ್ಷರ ಪರಿವಾರ, ಚೀನಿಭಾಷಾ ಪರಿವಾರ, ಸಿನೋಟಿಬೆಟ್ ಭಾಷಾ ಪರಿವಾರ, ಟಿಬೆಟೋ ಬರ್ಮನ್, ಇತ್ಯಾದಿ ಹೆಸರುಗಳಿಂದ ಕರೆಯುವರು, ಭಾರತದಲ್ಲಿ ಬಳಕೆಯಲ್ಲಿರುವ ಈ ಭಾಷಾ ಪರಿವಾರಕ್ಕೆ ಸೇರಿದ ಭಾಷೆಗಳನ್ನು ಅಧ್ಯಯನದ ದೃಷ್ಟಿಯಿಂದ ಟಿಬೆಟೋ ಬರ್ಮನ್ ಭಾಷಾ ಪರಿವಾರ ಎಂದು ಹೆಸರಿಸಿಕೊಳ್ಳಬಹುದು, ಟಿಬೆಟೋ ಬರ್ಮನ್ ಭಾಷೆಗಳು ಟಿಬೆಟೋ ಚೈನಿಸ್ ಭಾಷೆಗಳನ್ನು ಹೆಚ್ಚು ಹೋಲುತ್ತವೆ. ಟಿಬೆಟ್, ಬರ್ಮ, ಬಾಂಗ್ಲಾ, ನೇಪಾಳ, ಭೂತಾನ, ಸಯಾಂಚೀನ, ಇಂಡೋಚೀನ, ಭಾರತ ಮುಂತಾದ ಕಡೆಗಳಲ್ಲಿ ಹರಡಿಕೊಂಡಿವೆ.

ಈ ಭಾಷೆಗಳನ್ನು ಕೆಲವರು ಸಿನೋಟಿಬೆಟನ್‌ಭಾಷಾ ಪರಿವಾರ ಎನ್ನುವರು. ಇದು ಏಷ್ಯಾ ಖಂಡದ ಬಹು ವಿಶಾಲವಾದ ಕ್ಷೇತ್ರದಲ್ಲಿ ವ್ಯಾಪಿಸಿಕೊಂಡಿದೆ. ಆಡುವವರ ಸಂಖ್ಯೆಯಲ್ಲಿ ಬಹು ದೊಡ್ಡ ಭಾಷಾ ಪರಿವಾರ, ಉತ್ತರ ಭಾರತದ ಅಸ್ಸಾಂ, ತ್ರಿಪುರ, ಮಣಿಪುರ, ನಾಗಲ್ಯಾಂಡ್, ಸಿಕ್ಕಿಂ, ಮುಂತಾದ ಕಡೆಗಳ ಬೆಟ್ಟಗುಡ್ಡಗಳಲ್ಲಿ ಕಂಡು ಬರುವ ಗಾರೋ, ಬೋಡೋ, ನಾಗಾ, ಕುಕಿಚಿನ್ ಮುಂತಾದ ಭಾಷೆಗಳು ಈ ವರ್ಗಕ್ಕೆ ಸೇರುತ್ತವೆ.

ಟಿಬೆಟೋ ಬರ್ಮನ್ ಭಾಷಾ ಪರಿವಾರಕ್ಕೆ ಸೇರಿದ ಭಾಷೆಗಳು ಟಿಬೆಟ್‌ನಿಂದ ಬರ್ಮದವರೆಗೆ ಪಶ್ಚಿಮಕ್ಕೆ ಬಲೂಚಿಸ್ತಾನದಿಂದ ಯೂನಾನ್‌ನವರಿಗೆ ವ್ಯಾಪಿಸಿಕೊಂಡಿವೆ. ಈ ಭಾಷೆಗಳನ್ನು ವಿದ್ವಾಂಸರು ಹಿಮಾಲಯನ್ ಭಾಷೆಗಳು ಉತ್ತರ ಅಸ್ಸಾಮಿ ಭಾಷೆಗಳು, ಬರ್ಮಿಭಾಷೆಗಳು, ಬೋಡೋ ಭಾಷೆಗಳು, ನಾಗಾಭಾಷೆಗಳು, ಕುಕಿಚಿನ್‌ಭಾಷೆಗಳು, ಬರ್ಮಿ ಭಾಷೆಗಳು ಇತ್ಯಾದಿ ವರ್ಗಗಳಲ್ಲಿ ವರ್ಗೀಕರಿಸಿಕೊಂಡಿದ್ದಾರೆ. ಈ ಭಾಷೆಗಳನ್ನು ಮತ್ತೆ ಕೆಲವರು ಹಿಮಾಲಯನ್ ಭಾಷಾವರ್ಗ, ಅಸ್ಸಾಮಿ - ಬರ್ಮಿ ಭಾಷಾವರ್ಗ ಎಂದು ಎರಡು ವರ್ಗಗಳಲ್ಲಿ ವರ್ಗೀಕರಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಇವನ್ನು ಗಮನಿಸಿದ ಮತ್ತೆ ಕೆಲವರು ಹಿಮಾಲಯನ್ ಭಾಷಾವರ್ಗ, ಅಸ್ಸಾಮಿ ಬರ್ಮಿ ಭಾಷಾವರ್ಗ, ಕುಕಿಚಿನ್ ಭಾಷಾವರ್ಗ, ನಾಗಾಭಾಷಾವರ್ಗ, ಭಾಟಿಯ ಭಾಷಾವರ್ಗ, ಬೋಡೋಭಾಷಾವರ್ಗ, ನಿಫಾಭಾಷಾವರ್ಗ ಎಂದು ಏಳು ವರ್ಗಗಳಲ್ಲಿ ವರ್ಗೀಕರಿಸಿಕೊಳ್ಳಲು ಪ್ರಯತ್ನಿಸಿದರು. ಈ ಭಾಷೆಗಳು ಟಿಬೆಟ್, ನೇಪಾಳ, ಭೂತಾನ, ಬಾಂಗ್ಲಾ, ಭಾರತದ ಅಸ್ಸಾಮ್, ತ್ರಿಪುರ, ಮಣಿಪುರ, ನಾಗಲ್ಯಾಂಡ್ ಮುಂತಾದ

ಕಡೆಗಳಲ್ಲಿ ಹೆಚ್ಚು ಬಳಕೆಯಲ್ಲಿವೆ. ಟಿಬೆಟೋ ಬರ್ಮನ್ ಭಾಷೆಗಳನ್ನು ಕೆಲವು ಉತ್ತಮ ಸಾಹಿತ್ಯವನ್ನು ಸಂಪಾದಿಸಿ ಕೊಂಡಿರುವ ಭಾಷೆಗಳಾಗಿವೆ ಈ ಭಾಷೆಗಳ ಲಿಪಿಗಳು ಬ್ರಾಹ್ಮೀ ಮತ್ತು ಖರೋಷ್ಟಿ ಲಿಪಿಗಳಿಂದ ವಿಕಾಸಗೊಂಡ ಲಿಪಿಗಳಾಗಿ ಗೋಚರಿಸುತ್ತವೆ.

## ಅವರ್ಗೀಕೃತ ಭಾಷಾ ಪರಿವಾರ

ಭಾರತದ ಯಾವ ಭಾಷಾ ಪರಿವಾರಕ್ಕೂ ಸೇರದ ಯಾವ ಭಾಷೆಗಳನ್ನು ಹೆಚ್ಚು ಹೋಲಿಕೆಯಾಗದ ಅನೇಕ ಭಾಷೆ ಮತ್ತು ಉಪಭಾಷೆಗಳು ಭಾರತಾದ್ಯಂತ ಬಳಕೆಯಲ್ಲಿವೆ. ಈ ಭಾಷೆಗಳನ್ನು ವಿದ್ವಾಂಸರು ಅನಿಶ್ಚಿತ ಭಾಷೆಗಳು ಅಥವಾ ಅವರ್ಗೀಕೃತ ಭಾಷೆಗಳು ಎಂದು ಕರೆಯುವರು. ಭಾರತೀಯ ಭಾಷೆಗಳ ಸರ್ವೇಕ್ಷಣಾಕಾರ್ಯವನ್ನು ಆರಂಭಿಸಿದ ಗ್ರಿಯರ್‌ಸನ್ನದು ತನ್ನ ಗ್ರಂಥದಲ್ಲಿ ಸುಮಾರು ಇಪ್ಪತ್ತಕ್ಕೂ ಹೆಚ್ಚು ಭಾಷೆ ಮತ್ತು ಉಪಭಾಷೆಗಳನ್ನು ಅವರ್ಗೀಕೃತ ಭಾಷೆಗಳೆಂದು ಪಟ್ಟಿ ಮಾಡಿಕೊಂಡಿದ್ದಾನೆ. ಅವುಗಳಲ್ಲಿ ಕಾಶ್ಮೀರಿ, ಬುರುಘಾಸ್ಕಿ, ಕರೆಣ್ ಅಂಡಮಾನಿ ಮುಂತಾದವು ಮುಖ್ಯವಾಗಿವೆ. ಆಧುನಿಕ ಭಾಷಾ ವಿಜ್ಞಾನಿಗಳು ಭಾರತಾದ್ಯಂತ ಆರುನೂರಕ್ಕೂ ಹೆಚ್ಚು ಭಾಷೆ ಮತ್ತು ಉಪಭಾಷೆಗಳನ್ನು ಅವರ್ಗೀಕೃತ ಭಾಷೆಗಳು ಎಂದು ಪಟ್ಟಮಾಡಿ ತೋರಿಸಿದ್ದಾರೆ. ಇವುಗಳಲ್ಲಿ ಕೆಲವು ಸ್ವತಂತ್ರಭಾಷೆಗಳಾಗಿ ಕಂಡುಬಂದರೆ ಮತ್ತೆ ಕೆಲವು ಬೇರೆ ಬೇರೆ ಭಾಷೆಗಳ ಮಿಶ್ರಣವಾಗಿ ಗೋಚರಿಸುತ್ತವೆ.

ಪ್ರಾಚೀನ ಭಾರತದ ಕೆಲವು ಶಿಲಾಶಾಸನಗಳಲ್ಲಿ ಸುಮೇರಿಯನ್, ಎಟ್ರೊಸ್ಕನ್, ಮಿತಾನಿ ಮುಂತಾದ ಭಾಷೆಗಳ ಹೆಸರುಗಲು ದೊರೆಯುತ್ತವೆ. ಈಗ ಈ ಯಾವ ಭಾಷೆಗಳು ಬಳಕೆಯಲ್ಲಿಲ್ಲ. ಇವು ಭಾರತದಲ್ಲಿ ಯಾವ ಕಾಲದಲ್ಲಿ ಬಳಕೆಯಲ್ಲಿದ್ದುವು ಎಂಬುದರ ಬಗ್ಗೆ ಯಾವ ಖಚಿತವಾದ ಆಧಾರಗಳು ದೊರೆಯುವುದಿಲ್ಲ. ಗ್ರಿಯರ್‌ಸನ್ ಮಹಾಶಯನು ತನ್ನ ಗ್ರಂಥದಲ್ಲಿ ಹೆಸರಿಸಿಕೊಂಡಿರುವ ಅನಿಶ್ಚಿತ ಭಾಷೆಗಳನ್ನು ಕೆಲವು ವಿದ್ವಾಂಸರು ಆಳವಾಗಿ ಪರಿಶೀಲಿಸಿ ವರ್ಗೀಕರಿಸಿಕೊಳ್ಳುವ ಪ್ರಯತ್ನಮಾಡಿದ್ದಾರೆಯಾದರೂ ಈ ದಿಕ್ಕಿನಲ್ಲಿ ಸಾಕಷ್ಟು ಮತ ಭೇದಗಳಿವೆ. ಕಾಶ್ಮೀರದ ಸುತ್ತಮುತ್ತಲ ಪ್ರದೇಶಗಳಲ್ಲಿ ಬುರುಘಾಸ್ಕಿ ಭಾಷೆ ಆಡುವವರಿದ್ದಾರೆ. ಸುನೀತಿಕುಮಾರ್ ಚಟರ್ಜಿಯವರು ಬುರುಷಾಸ್ಕಿ ಭಾಷೆಯನ್ನು ದ್ರಾವಿಡ ಮತ್ತು ಆಸ್ಟ್ರಿಕ್ ಭಾಷಾ ಪರಿವಾರಗಳಿಗೆ ಸೇರಿಸಲು ಪ್ರಯತ್ನಿಸಿದ್ದರು, ಅಂಡಮಾನ್ ದ್ವೀಪದಲ್ಲಿ ಬಳಕೆಯಲ್ಲಿರುವ ಅಂಡಮಾನಿ ಭಾಷೆಯನ್ನು ಮಾನವ ಶಾಸ್ತ್ರತಜ್ಞರು ನೀಗ್ರೋ ಗುಂಪಿಗೆ ಸೇರಿಸಲು ಪ್ರಯತ್ನಿಸಿದರು. ಈ ಯಾವ ಪ್ರಯತ್ನವು ಹೆಚ್ಚು ಸಮಂಜಸವಾಗಿ ಕಂಡುಬರಲಿಲ್ಲ. ಕರೆಣ್ ಮತ್ತು ಮಾನ್ ಭಾಷೆಗಳನ್ನು ಬರ್ಮದಲ್ಲಿ ಆಡುವವರಿದ್ದಾರೆ. ಇವುಗಳನ್ನು ಆಡುವವರು ಭಾರತದಲ್ಲಿಲ್ಲ. ಹೀಗೆ ಭಾರತದಲ್ಲಿ ಕಂಡುಬರುವ ಎಲ್ಲಾ ಅವರ್ಗೀಕೃತ ಭಾಷೆಗಳನ್ನು ವರ್ಗೀಕರಿಸಿಕೊಳ್ಳುವ ಪ್ರಯತ್ನಗಳು ನಡೆದಿವೆಯಾದರೂ ಅವು ಇನ್ನೂ ಅಸ್ಪಷ್ಟವಾಗಿಯೇ ಉಳಿದುಕೊಂಡಿವೆ. ಈ ದಿಕ್ಕಿನಲ್ಲಿ ಆಳವಾದ ಸಂಶೋಧನೆ ನಡೆಯದ ಹೊರತು ಇವುಗಳ ಬಗ್ಗೆ ಯಾವುದನ್ನು ಖಚಿತವಾಗಿ ಹೇಳಲು ಬರುವುದಿಲ್ಲ. ಭಾರತೀಯಭಾಷೆಗಳ ಜೊತೆಗೆ ಬೇರೆ ಬೇರೆ ವಿದೇಶಿ ಭಾಷೆಗಳು ಬಳಕೆಯಲ್ಲಿರುವುದು ಕಂಡುಬರುತ್ತವೆ. ಇಂಗ್ಲೀಷ್ ಭಾಷೆಯನ್ನು ಭಾರತದಲ್ಲಿ ಅಧಿಕ ಸಂಖ್ಯೆಯಲ್ಲಿ ಆಡುವವರಿದ್ದಾರೆ.ಈಗ ಭಾರತದ ಸಂಪರ್ಕ ಭಾಷೆಯಾಗಿ ಮುಂದುವರಿಯುತ್ತಿದೆ.

ಭಾರತದ ಸಂವಿಧಾನ ಮಾನ್ಯ ಮಾಡಿರುವ ಭಾಷೆಗಳಲ್ಲಿ ಅಸ್ಸಾಮಿ, ಬಂಗಾಳಿ, ಗುಜರಾತಿ, ಹಿಂದಿ, ಕಾಶ್ಮೀರಿ, ಪಂಜಾಬಿ, ಸಿಂಧಿ, ಸಂಸ್ಕೃತ, ಉರ್ದು, ಮರಾಠಿ, ಕನ್ನಡ, ಮಲೆಯಾಳಂ, ತಮಿಳು, ತೆಲುಗು, ಉರಿಯ ಮುಂತಾದ ಭಾಷೆಗಳು ಮುಖ್ಯವಾಗಿವೆ. ಭಾರತದಲ್ಲಿ ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯಿಕ, ರಾಜಕೀಯ, ಆರ್ಥಿಕವಾಣಿಜ್ಯ, ಶೈಕ್ಷಣಿಕ, ಮುಂತಾದ ಚಟುವಟಿಕೆಗಳಿಗೆ ಆಯಾ ರಾಜ್ಯ ಭಾಷೆಗಳನ್ನೇ ಹೆಚ್ಚು ಬಳಸಲಾಗುತ್ತಿದೆ. ಇವು ಆಯಾ ರಾಜ್ಯಗಳಲ್ಲಿ ಆಡಳಿತ ಭಾಷೆಗಳಾಗಿಯೂ ರಾಜ್ಯಭಾಷೆಗಳಾಗಿಯೂ ಬಳಕೆಯಲ್ಲಿವೆ, ಭಾರತದ ಸಂವಿಧಾನವು ಮಾನ್ಯ ಮಾಡಿರುವ ಈ ಭಾಷೆಗಳಲ್ಲಿ ಉತ್ತಮ ಸಾಹಿತ್ಯ ದೊರೆಯುವುದು, ಭಾರತದಲ್ಲಿ ಇಪ್ಪತ್ತು ಕೋಟಿಗೂ ಹೆಚ್ಚು ಜನರು ಆಡುತ್ತಿರುವ ಹಿಂದಿ ಭಾಷೆಯನ್ನು ಭಾರತದ ಸಂಪರ್ಕ ಭಾಷೆಯನ್ನಾಗಿ ಬಳಸಲಾಗುತ್ತಿದೆ. ಪ್ರತಿಯೊಂದು ರಾಷ್ಟ್ರವು ತನ್ನದೇ ಆದ ರಾಷ್ಟ್ರ ಭಾಷೆಯನ್ನು  ಹೊಂದಿರಬೇಕಾದುದು ಅತ್ಯಾವಶ್ಯಕ. ಈ ದಿಕ್ಕಿನಲ್ಲಿ ಭಾರತ ಹೆಜ್ಜೆ ಇಟ್ಟಿದೆ. ಭಾರತದ ಕೇಂದ್ರ ಸಾಹಿತ್ಯ ಅಕಾಡೆಮಿಯು ೨೨ ಕ್ಕೂ ಹೆಚ್ಚು ಬಾಷೆಗಳನ್ನು ಮಾನ್ಯ ಮಾಡಿದೆ. ಸಂವಿಧಾನ ಮಾನ್ಯ ಮಾಡಿರುವ ಭಾಷೆಗಳ ಜೊತೆಗೆ ಡೋಗ್ರಿ, ನೇಪಾಳಿ, ರಾಜಾಸ್ಥಾನಿ, ಕೊಂಕಣಿ,ಇಂಗ್ಲೀಷ್ ಮೈಥಿಲಿ ಮತ್ತು ಮಣಿಪುರಿ ಭಾಷೆಗಳು ಸೇರುತ್ತವೆ. ಈ ಬೇರೆ ಬೇರೆ ಭಾಷೆಗಳಲ್ಲಿ ಸಾಹಿತ್ಯಿಕ ಚಟುವಟಿಕೆಗಳು ಹೆಚ್ಚು ಸಾಗುತ್ತಿವೆ. ಇವು ಸಾಹಿತ್ಯಿಕವಾಗಿ ಮಾತ್ರವಲ್ಲದೆ ಸಾಂಸ್ಕೃತಿಕವಾಗಿಯೂ ಬೆಳೆದು ಬಂದಿವೆ ಇವು ಭಾರತದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ. ಈ ಬೇರೆ ಬೇರೆ ಭಾಷೆಗಳ ಸಾಹಿತ್ಯ ಚಟುವಟಿಕೆಗಳಿಗೆ ಕೇಂದ್ರ ಸರ್ಕಾರ ಪ್ರೋತ್ಸಾಹ ನೀಡುತ್ತಿದೆ.

ಭಾರತೀಯ ಭಾಷೆಗಳ್ನು ಕುರಿತ ಅನೇಕ ಸಂಶೋಧನಾ ಗ್ರಂಥಗಳು ಹೊರಬಂದಿವೆ. ಈ ಭಾಷೆಗಳನ್ನು ಕುರಿತು ಆಳವಾದ ಸಂಶೋಧನೆ ಗ್ರಂಥಗಳು ಹೊರಬಂದಿವೆ. ಈ ಭಾಷೆಗಳನ್ನು ಕುರಿತು ಆಳವಾದ ಸಂಶೋಧನೆ ಕೈಗೊಂಡಿರುವ ಅನೇಕ  ಹಿರಿಯ ಮತ್ತು ಕಿರಿಯ ವಿದ್ವಾಂಸರಿದ್ದಾರೆ. ಈ ದಿಕ್ಕಿನಲ್ಲಿ ಪಾಶ್ಚಾತ್ಯರ ಕೊಡುಗೆಯೇನು ಕಡಿಮೆಏನಿಲ್ಲ. ಭಾರತೀಯ ಭಾಷೆಗಳ ಅಧ್ಯಯನಕ್ಕೆ ಇಂದು ಅನೇಕ ಸಂಘ ಸಂಸ್ಥೆಗಳು, ವಿಶ್ವ ವಿದ್ಯಾನಿಲಯಗಳು ಹಗಲಿರುಗಳು ದುಡಿಯುತ್ತಿವೆ. ಈ ದಿಕ್ಕಿನಲ್ಲಿ ಇನ್ನೂ ಹೆಚ್ಚಿನ ವಿಚಾರಗಳನ್ನು ನಿರೀಕ್ಷಿಸಬಹುದಾಗಿದೆ. ಈ ಅಧ್ಯಯನಗಳ ಫಲದಿಂದ ಭಾರತೀಯ ಭಾಷೆ ಮತ್ತು ಉಪ ಭಾಷೆಗಲು ಇವುಗಳ ಬಗ್ಗೆ ಇರುವ ಅನೇಕ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಸಹಾಯಕವಾಗಬಹುದು. ಇದರಿಂದ ಭಾರತೀಯ ಭಾಷೆಗಳ ವರ್ಗೀಕರಣ ಸುಲಭವಾಗಬಹುದು.

# ಅಧ್ಯಾಯ - 3
# ದ್ರಾವಿಡ ಪರಿವಾರದ ಭಾಷೆಗಳು

1. ಅಧ್ಯಯನದ ಘಟ್ಟಗಳು.

   ಆರಂಭ ಕಾಲ - ಮಧ್ಯಕಾಲ- ಆಧುನಿಕ ಕಾಲ.

2. ದಕ್ಷಿಣ ದ್ರಾವಿಡ ಭಾಷೆಗಳು.

3. ಮಧ್ಯ ದ್ರಾವಿಡ ಭಾಷೆಗಳು.

4. ಉತ್ತರ ದ್ರಾವಿಡ ಭಾಷೆಗಳು.

# ದ್ರಾವಿಡ ಪರಿವಾರದ ಭಾಷೆಗಳು

'' ದ್ರಾವಿಡ '' ಎಂಬುವುದು ಮೂಲತಃ ಒಂದು ಪ್ರತ್ಯೇಕ ಜನಾಂಗದ ಹೆಸರು. ಮೆಡಿಟರೇನಿಯನ್ ಭಾಗದಿಂದ ಕ್ರಿ.ಶ. ಪೂರ್ವ 5000 ವರ್ಷಗಳ ಆಚೆಗೆ ಇರಾಕ್, ಇರಾನ್ ಮಾರ್ಗವಾಗಿ ಭಾರತದೆಡೆಗೆ ಸಾಗಿ ಭಾರತದ ಸಿಂಧೂನದಿ ತೀರದಲ್ಲಿ ಕ್ರಿ.ಶ. ಪೂರ್ವ 500 ವರ್ಷಗಳ ಹಿಂದೆ ನೆಲೆಸಿದರು. ಸಮೃದ್ಧ ನಾಗರಿಕ ಜೀವನವನ್ನು ನಡೆಸುತ್ತ ತಮ್ಮದೇ ವಿಶಿಷ್ಟ ಶಿವಸಂಸ್ಕೃತಿಯನ್ನು ಬೆಳೆಸಿಕೊಂಡಿದ್ದರು. ಅವರು ಬಳಸುತ್ತಿದ್ದ ಭಾಷೆಯ ಮೂಲ ದ್ರಾವಿಡ ಭಾಷೆ ತಮಿಳ್ ಎಂಬ ಹೆಸರು ಅದಕ್ಕೆ ಇದ್ದಿರಬಹುದೆಂದೂ ಅದನ್ನು ಗ್ರೀಕರು ''ದ್ರವಿರ್ಖ್'' 'ದ್ರಮಿಳ್' 'ದ್ರಮಿಡ' 'ದ್ರಾವಿಡ' ಎಂಬುದಾಗಿ ಕಾಲಾನುಕ್ರಮದಲ್ಲಿ ಬಳಸಿರಬಹುದೆಂದೂ ವಿದ್ವಾಂಸರು ಊಹಿಸುತ್ತಾರೆ.

ಸಂಸ್ಕೃತದಲ್ಲಿ 'ದ್ರಾವಿಡ' 'ದ್ರಮಿಡ' ಮತ್ತು ದ್ರಾವಿಡ ಮೂರು ರೂಪಗಳಿವೆ. 'ದ್ರಾವಿಡ' ಪದ 'ದ್ರಮಿಳ' ಪದದ ಸಂಸ್ಕೃತ ರೂಪ ಪಾಳಿ ಭಾಷೆಯಲ್ಲಿ ರಚಿಸಲಾದ ಮಹಾವಂಶದಲ್ಲಿ ತಮಿಳರನ್ನು ದಮಿಳರೆಂದೇ ಕರೆಯಲಾಗಿದೆ. 'ದ್ರಾವಿಡ' ಕ್ಕೆ ಸಂಬಂಧಿಸಿದಂತೆ ಇತರೆ ಆಧಾರಗಳನ್ನು ಗಮನಿಸಿದಾಗ, ಪ್ರಾಕೃತ ಭಾಷೆಯಲ್ಲಿ 'ದವಿಳ' ಹಾಗೂ 'ದವಿಡ' ಪ್ರಯೋಗ ಕಂಡು ಬರುತ್ತವೆ. ಬೌದ್ಧರನ್ನು ಕುರಿತು ಬರೆದ ತಾರನಾಥ ಅವರ History of Buddism in indio. ಕೃತಿಯಲ್ಲಿ 'ದ್ರಮಿಳ' ರನ್ನು ಹೆಸರಿಸಿದ್ದಾರೆ, ಮಲಯಾಳಂನ ಪುರಾಣ ಕೃತಿಗಳಲ್ಲಿ 'ದ್ರಮಿಳ' ರೂಪ ಕಂಡು ಬಂದಿದೆ ಅಂತೆಯೇ ಬಾದಾಮಿಯರ ಮಹಾಕೂಟದ ಮಂಗಳೇಶನ ಸ್ತಂಭಶಾಸನದಲ್ಲೂ 'ದ್ರಮಿಳ' ಪದದ ಉಲ್ಲೇಖವಿದೆ. ಆರ್.ನರಸಿಂಹಚಾರ್‌ರವರು ಪಾಶ್ಚಮಾತ್ಯ ಪ್ರವಾಸಿಗಳ ಪುರಾತನ ಕೃತಿಗಳಲ್ಲಿ 'ದಮುಲಿ' ದಮುಲಿಚೆ' ಪ್ರಯೋಗಗಳಿರುವುದೆಂದು ಉಲ್ಲೇಖಿಸಿದ್ದಾರೆ. 'ದ್ರಾವಿಡ' ನಿಷ್ಪತ್ತಿ ಕುರಿತು ಹೇಳುವಾಗ ಸಂಸ್ಕೃತದಲ್ಲಿ 'ದ್ರಮಿಳ' ದಮಿಳ'ಗಳಿಂದಾಗಿ ದ್ರಾವಿಡ ಪದ ಸಿದ್ದಿಸಿವೆ. ಎಂಬುದಕ್ಕೆ "ಮೌ ಧ್ವನಿ ಮಾ ।ವ। ಆಗಿ ಪರಿವರ್ತಿಸಿರುವುದಕ್ಕೆ ಪಾಳಿಯಲ್ಲಿ ದೊರೆತ (ಮಹಾವಂಶ) 'ದಮಿಳ' ರೂಪ ಹಾಗೂ ಜೈನರ ಪ್ರಾಕೃತ ಸಾಹಿತ್ಯದಲ್ಲಿ ಉಲ್ಲೇಖಿತ ದಮಿಳ 'ದವಿಡ' ಪದಗಳನ್ನು ನೀಡಿದ್ದಾರೆ 'ದ್ರಮಿಡ' ರೂಪ ಮಲಯಾಳಿ ಕೃತಿ ಮತ್ತು ಮಂಗಲೀಶನ ಶಾಸನದಲ್ಲಿ 'ದ್ರಮಿಳ' ಆಗಿರುವುದನ್ನು ವಿವರಿಸುತ್ತಾ, ಇದು ಮತ್ತೆ (ದ್ರವಿಡ) ತಮಿಳಿಗೆ ಹಿಂತಿರುವಾಗ 'ತಿರಿವಿಡ' ಆಗಿದೆ ಎಂಬ ಅಭಿಪ್ರಾಯ ತಾಳಿದ್ದಾರೆ.

ಸುನೀತಿ ಕುಮಾರ ಚಟರ್ಜಿ ಅವರು 'ದ್ರಾವಿಡ'ಕ್ಕೆ ಸಂವಾದಿಯಾಗಿ 'ಮೆಡಿಟರೇನಿಯನ್ ತೀರದ ಮೂಲ ನಿವಾಸಿಗಳು ತಮ್ಮನ್ನು ತೆಮೀಲೈ (ತೆರಮಿಲೈ) ಎಂದು ಕರೆದುಕೊಂಡಿರುವರು. ಇತಿಹಾಸಕಾರ ಹೆರೊಡಟಸ್ ಅಭಿಪ್ರಾಯವೂ ಇದೆ ಆಗಿದೆ. ಲಿಸಿಯನ್ನರು ತಮ್ಮನ್ನು ''ತ್ರಮಿಲಿ' ಎಂದು ಕರೆದುಕೊಂಡ ಕಾರಣ 'ತೆರ್ಮಿಲೈ' ಮತ್ತು ತ್ರಮಿಲಿ ಗಳು 'ತಮಿಳು' ಪಾಠದ ಮೂಲ ರೂಪಗಳಿರಬೇಕೆಂದು. ಊಹಿಸಿ, ಈ ಜನರೇ, ಪೂರ್ವ ದ್ರಾವಿಡರಿರಬಹುದೆಂಬ ಅಭಿಪ್ರಾಯ ಪಟ್ಟಿದ್ದಾರೆ. ತಮಿಳು 'ಗ್ರೀಕ್' ರಲ್ಲಿ 'ದಮಿರ್ಖ್' ಅಥವಾ ತಮಿರ್ಖ್' ಗಳಿಗೆ ಒಂದೇ ಮೂಲವಾದ ಪೂರ್ವ ದ್ರಾವಿಡ'ದ ಥಮಿರ್ಖ್ ಇರಬೇಕೆಂದೂ ತಿಳಿಸುತ್ತಾ ನಿಷ್ಪತ್ತಿಯನ್ನು ಹೀಗೆ ನಿರೂಪಿಸಿದ್ದಾರೆ.

ತಮಿರಝ್), ದಮಿರಝ್), ದಮಿಳ), ದ್ರಮಿರಝ್), ದ್ರಮಿಳ), ದ್ರಮಿಡ), ದ್ರವಿಡ), ತ್ರಿವ್ಮಲಿ, ಎಂದು ವಿವರಿಸಿದ್ದಾರೆ. ಇದರಿಂದ 'ದ್ರಮಿಡ'), 'ದ್ರವಿಡ' ರೂಪಗಳು ಜನಾಂಗಕ್ಕೆ ಅನ್ವಯಿಸದೆ ಮೂಲ ತಮಿಳರಿಗೆ ಮಾತ್ರ ಅನ್ವಯವಾಗಿದೆ ಎಂಬ ಅಭಿಪ್ರಾಯವಿದೆ.

ಘೋಷ ವರ್ಣವಲ್ಲದ ಅಘೋಷ ವರ್ಣವಾದ ವರ್ಗದ ಪ್ರಥ ಮೊಕ್ಷರ 'ತ ಕಾರ 'ದ' ಕಾರವಾಗಿ ಪರಿವರ್ತನೆ ಹೊಂದಿರುವುದಕ್ಕೆ ಕಾರಣಗಳೇನು ಎಂಬ ಪ್ರಶ್ನೆಗೆ ಉತ್ತರಿಸುವುದು ಕಷ್ಟಸಾಧ್ಯ, ಆದರೆ ಸಂಸ್ಕೃತ, ಪಾಲಿ ಮತ್ತು ಪ್ರಾಕೃತಗಳಲ್ಲಿ ಈ ಬಗೆಯ ಪ್ರಯೋಗವಿದೆ ಎಸ್.ಕೆ. ಚಟರ್ಜಿ ಅವರು ದ್ರಾವಿಡ ಭಾಷೆಗಳಲ್ಲಿ ಪುರಾತನ ಕಾಲದಿಂದಲೂ ಘೋಷ ವರ್ಣಗಳಿಂದ ಪ್ರಾರಂಭವಾಗುವ ರೂಪಗಳಿದ್ದವು ಎಂದು ಪುರಸ್ಕರಿಸುತ್ತಾ ಪುನಾರರ್ಚಿತ ರೂಪವಾಗಿರುವುದಕ್ಕೆ 'ದ್ರವಿಡ' ರೂಪವನ್ನು ಉದಾಹರಿಸಿರುವರು.

ಈ ಬಗ್ಗೆ ದ್ರಾವಿಡ ಭಾಷಾ ವಿಜ್ಞಾನಿಗಳಲ್ಲಿಯೇ ಭಿನ್ನಾಭಿಪ್ರಾಯವಿದೆ. ಕಾಲ್ಡ್‌ವೆಲ್ ಅವರು ಈ ಸಮಸ್ಯೆ ದ್ರಾವಿಡ ಬಗೆಗಿನ ಗಳನ್ನೆಲ್ಲಾ ಪರಿಗಣಿಸಿ ''ತಮಿಲ್'ನಿಂದ 'ದ್ರಾವಿಡ' ರೂಪ ನಿಷ್ಪತ್ತಿಯಾಯಿತು. ಎಂಬುದಕ್ಕಿಂತಲೂ 'ದ್ರಾವಿಡ'ದಿಂದ ತಮೀಲ್, ರೂಪ ನಿಷ್ಪತ್ತಿ ಮಾಡುವುದೇ ಸೂಕ್ತ ಎಂದು ಹೇಳುತ್ತಾ ಚೋಳ, ಕೇರಳಿ, ಆಂದ್ರ ಮೊದಲಾದ ಸಂಸ್ಕೃತ ದೇಶ, ವಾಚಕಗಳಂತೆಯೇ ಆರ್ಯರು ತಮಿಳರನ್ನು 'ದ್ರವಿಡ' ಇಲ್ಲವೇ 'ದ್ರಾವಿಡ' ಎಂದು ಕರೆದಿರಬಹುದೆಂದು ಅಭಿಪ್ರಾಯ ವ್ಯಕ್ತವಾಗಿದೆ.

ಒಟ್ಟಿನಲ್ಲಿ ಈ ಮೇಲಿನ ಭಾಷಿಕ ಕಾರಣಗಳಿಂದ 'ದ್ರಾವಿಡ' ಪದ ನಿಷ್ಪತ್ತಿಯನ್ನು ಹೀಗೆ ವಿವರಿಸಬಹುದು

★ ದ್ರಾವಿಡ ಪದ ಸಂಕುಚಿತಾರ್ಥದಲ್ಲಿ 'ತಮಿಳು' ಭಾಷೆಯನ್ನು ಕುರಿತು, ವಿಶಾಲಾರ್ಥದಲ್ಲಿ ಇಡೀ ಬಾಷಾ ವರ್ಗಕ್ಕೆ ಹಾಗೂ ಜನಾಂಗಕ್ಕೆ ಅನ್ವಯವಾಗಿರುವುದು ಗಮನಾರ್ಹ

★ 'ದ್ರಾವಿಡ' ಪದ ಮೂಲತಃ ದ್ರಾವಿಡದ್ದಲ್ಲ ; ಅದು ಸಂಸ್ಕೃತರೂಪ

★ ದ್ರಾವಿಡ ಪದದ ದ್ರಮಿಳ, ದಮಿಳ, ದ್ರಮಿಡ, ದ್ರವಿಡ ಎಂಬತ್ಯಾದಿ ರೂಪಗಳಲ್ಲಿ ನಿಷ್ಪನ್ನ ಗೊಂಡಿದೆ.

★ ದ್ರವಿಡ ದ್ರಾವಿಡ ಪದಗಳು ದ್ರಮಿಡ ಪದದ ಇತ್ತೀಚೆಗೆ ಬದಲಾದ ವಿಸ್ತೃತ ರೂಪಗಳು

★ ತಮಿಳಿನಲ್ಲಿ 'ದ್ರಾವಿಡ' ಪದವನ್ನು 'ತಿರಮಿಡ, ತಿರವಿಡ ಎಂದು ಬಳಸುತ್ತಾರೆ.

ಒಟ್ಟಿನಲ್ಲಿ 'ದ್ರಾವಿಡ' ಕೇವಲ ಸಿಮಿತಾರ್ಥದಲ್ಲಿ 'ತಮಿಳಿಗೆ' ಮಾತ್ರ ಪ್ರಯೋಗಗೊಳ್ಳದೆ ಭಾಷಾ ಪರಿವಾರಕ್ಕೆ ಮತ್ತು ಜನಾಂಗಕ್ಕೆ ಅನ್ವಯಗೊಂಡ ವಿಶಾಲಾರ್ಥ ಪಡೆದಿದೆ.

## ದ್ರಾವಿಡ ಭಾಷಾಧ್ಯಯನದ ಘಟ್ಟಗಳು

ಇಪ್ಪತ್ತನೆಯ ಶತಮಾನದಲ್ಲಿ ದ್ರಾವಿಡಭಾಷಾ ಅಧ್ಯಯನ ಉತ್ತುಂಗ ಶಿಖರವನ್ನೇರಿದೆ, ಇಂಗ್ಲೀಷ್ ಅಷ್ಟೇ ಅಲ್ಲ - ಫ್ರೆಂಚ್, ಜರ್ಮನ್, ಇಟಾಲಿಯನ್, ಪೊರ್ಚುಗೀಸ್, ರಶಿಯನ್, ಚೀನಿ, ಜಪಾನಿ ಮುಂತಾದ ಪ್ರಪಂಚದ ಹಲವಾರು ಭಾಷೆಗಳಲ್ಲಿ ದ್ರಾವಿಡ ಭಾಷೆ, ದ್ರಾವಿಡ ಜನಾಂಗ, ದ್ರಾವಿಡ ಸಂಸ್ಕೃತಿ, ಪ್ರಪಂಚದ ಇತರ ಭಾಷೆ - ಜನಾಂಗಗಳೊಂದಗಿನ ಸಂಬಂಧ ಇತ್ಯಾದಿ ವಿಷಯಗಳನ್ನು ಕುರಿತು ಹಲವು ವಿದ್ವಾಂಸರು ಗಣನೀಯ ಅಧ್ಯಯನಗಳನ್ನು ಮಾಡಿದ್ದಾರೆ. ಇಷ್ಟೊಂದು ವ್ಯಾಪಕ ಮತ್ತು ಆಳವಾದ ಅಧ್ಯಯನಕ್ಕೆ ದ್ರಾವಿಡ ಕ್ಷೇತ್ರ ಆಕರ್ಷಿಸಿದ್ದಕ್ಕೆ ಮುಖ್ಯ ಕಾರಣವೆಂದರೆ - ವಿಶ್ವದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ದ್ರಾವಿಡ ಭಾಷೆಗಳನ್ನು ಬಹು ಪ್ರಾಚೀನಕಾಲದಿಂದಲೂ ಬಳಸುತ್ತಲೇ ಇರುವ ಜನ ಹರಡಿಕೊಂಡಿರುವುದೇ ಆಗಿದೆ. ಏಶಿಯಾ, ಯುರೋಪ, ಆಫ್ರಿಕಾ ಖಂಡಗಳಲ್ಲಿ ಇವರ ಸಂಖ್ಯೆ ಇನ್ನೂ ಗರಿಷ್ಠವಾಗಿದೆ. ಭಾರತದಲ್ಲಿಯೂ ಪ್ರತಿ ನಾಲ್ಕು ಜನರಲ್ಲಿ ಒಬ್ಬರು ದ್ರಾವಿಡ ಭಾಷೆಗಳನ್ನಾಡುವವರು ದೊರೆಯುತ್ತಾರೆ. ನೂರು ಕೋಟಿ ಭಾರತೀಯರಲ್ಲಿ ೨೫ ಕೋಟಿಗೂ ಹೆಚ್ಚು ಸಂಖ್ಯೆ ದ್ರಾವಿಡ ಭಾಷಿಕರಿದ್ದಾರೆ. ಭಾರತದ ಆಚೆ ಆಫ್ರಿಕಾ, ಇರಾನ್, ಇರಾಕ್, ಆಸ್ಟ್ರೇಲಿಯಾ, ಚೀನ, ರಶಿಯಾ, ಇಂಡೋನೇಶಿಯಾ, ಮಲೇಶಿಯಾ, ಮಾಯನ್ಮಾರ್, ಸಿಂಗಪೂರ, ಜಪಾನ್ ಹೀಗೆ ಹಲವಾರು ದೇಶಗಳಲ್ಲಿ ದ್ರಾವಿಡರಿದ್ದಾರೆ. ಚೀನ, ಜಪಾನ್ ದೇಶಗಳೊಂದಿಗಿನ ಸಂಬಂಧ ಪ್ರಾಚೀನ ಕಾಲದಲ್ಲಿ ಹೆಚ್ಚು ಗಾಢವಾಗಿತ್ತೆಂಬುದು ತಿಳಿದುಬಂದಿದೆ. ಬಿರುಗಾಳಿ ಬೀಸಿದಾಗ ಒಂದೆಡೆಗಿದ್ದ ತರಗೆಲೆಗಳು ಚಲ್ಲಾಪಿಲ್ಲಿಯಾಗಿ ಅತ್ತಿತ್ತ ಪಸರಿಸುವಂತೆ ಪ್ರಕೃತಿ ವಿಕೋಪ, ಅನ್ಯ ಜನಾಂಗೀಯ ದಾಳಿಗಳಿಂದಾಗಿ ದ್ರಾವಿಡರು ಭಾರತವನ್ನು ಒಳಗೊಂಡು ಬೇರೆ ಬೇರೆ ದೇಶಗಳಲ್ಲಿ ಹರಡಿಕೊಂಡುಬಿಟ್ಟಿದ್ದಾರೆ. ಸದ್ಯ ಅವರು ದಟ್ಟವಾಗಿ ವಾಸಿಸಿದ್ದ ಪ್ರದೇಶವು ದಕ್ಷಿಣ ಭಾರತವಾದರೂ, ದಕ್ಷಿಣ ಭಾರತದ ದ್ರಾವಿಡ ಭಾಷಿಕರೆಲ್ಲರೂ ಮೂಲ ದ್ರಾವಿಡ ವಂಶಸ್ಥರಲ್ಲ.

ದ್ರಾವಿಡ ಭಾಷೆಗಳ ಪ್ರತ್ಯೇಕ ಅಸ್ತಿತ್ವವನ್ನೇ ಅರ್ಥಮಾಡಿಕೊಳ್ಳದೆ ಸಂಸ್ಕೃತದ ಕಸದ ಬುಟ್ಟಿಯಲ್ಲಿ ಹಾಕಿ ಮೂಲೆಗುಂಪು ಮಾಡಲಾಗಿತ್ತು. ದ್ರಾವಿಡ ಭಾಷೆಗಳನ್ನು ಕುರಿತು ವ್ಯಾಕರಣಗಳನ್ನು ಬರೆದ ಪ್ರಾಚೀನರೆಲ್ಲ ಸಂಸ್ಕೃತದಿಂದಲೇ ಇವು ಹುಟ್ಟಿದಂತಹವು ಎಂದು ನಂಬಿದ್ದರು. ೧೮ನೆಯ ಶತಮಾನದ ಅನಂತರವೇ ದ್ರಾವಿಡ ಭಾಷೆಗಳ ಸ್ವತಂತ್ರ್ಯ ಅಸ್ತಿತ್ವದ ವಾಸ್ತವಾಂಶ ಹೊರಬಿದ್ದು ಕಾಲ್ಡವೆಲ್ ಮಹಾಶಯನ ''ತೌಲನಿಕ ವ್ಯಾಕರಣ'' ಪ್ರಕಟಗೊಂಡ ಕೂಡಲೇ ಇಡೀ ಜಗತ್ತೇ ದ್ರಾವಿಡ ಭಾಷಾಧ್ಯಯನದ ಪ್ರಕ್ರಿಯೆಯೆಡೆಗೆ ಗಮನ ಹರಿಸಿತು. ವಿದೇಶಿಯರಿಗೆ ಅದರಲ್ಲೂ ಗ್ರೀಕರಿಗೆ ದ್ರಾವಿಡರ (ಅವರ ಭಾಷೆಯನ್ನು 'ದಮಿರಝ್' ಎಂದು ಅವರು ಕರೆಯುತ್ತಿದ್ದರು.) ಸಂಪರ್ಕ ಪ್ರಾಗೈತಿಹಾಸಿಕ ಕಾಲದಿಂದಲೂ ಇತ್ತು ಆದರೆ ಆಧುನಿಕ ಕಾಲದಲ್ಲಿ ಕ್ರಿ.ಶ. ೧೫೫೪ ರಲ್ಲಿ ಅಂದರೆ ವಾಸ್ಕೋಡಿಗಾಮ ಭಾರತಕ್ಕೆ ಕಾಲೂರಿದ ೫೫ ವರ್ಷಗಳ ಅನಂತರ ದ್ರಾವಿಡರ ಪರಿಚಯ ವಿದೇಶಿಯರಿಗೆ ಆಯಿತು. ಪೋರ್ಚುಗೀಸ್ ಗಾಲದ ಲಿಸ್ಬನ್‌ನಲ್ಲಿ ಲ್ಯಾಟಿನ್ ಭಾಷೆಯಲ್ಲಿ ಭಾಷಾಂತರಗೊಂಡ ತಮಿಳು ಪುಸ್ತಕವೊಂದು ಮೊಟ್ಟಮೊದಲು ಪ್ರಕಟವಾಯಿತು. 'ಚರ್ತಿಲ್ಹ' ಎಂಬ ಈ ಕೃತಿಯನ್ನು ಆನ್ರಿಕ್ವೆರಝ್ (ಆಧುನಿಕರು ಅವನನ್ನು 'ಹೆನ್ರಿಕ್ ಹೆನ್ರಿಕ್ವೆಸ್' ಎನ್ನುತ್ತಾರೆ) ಸಿದ್ಧಪಡಿಸಿದರು. ಮುದ್ರಣ ಪ್ರಪಂಚದ

ಐತಿಹಾಸಿಕ ಅಪರೂಪದ 'ದಾಖಲೆ'ಯಾಗಿ ಲಭ್ಯ ಇರುವ ಇದರ ಒಂದೇ ಒಂದು ಪ್ರತಿಯನ್ನು ಲಿಸ್ಬನ್‌ನಲ್ಲಿ ಕಬ್ಬಿಣ ಕಪಾಟಿನಲ್ಲಿ ಭದ್ರವಾಗಿ ಕಾದಿರಿಸಲಾಗಿದೆ.

## 1. ಆರಂಭ ಕಾಲ (ಕ್ರಿ.ಶ. ೧೮೧೬- ೧೯೦೫)

ಕ್ರಿ.ಶ. ೧೮೧೬ ರಲ್ಲಿ ಭಾರತದಲ್ಲಿ ಆಯ್.ಸಿ.ಎಸ್. ಅಧಿಕಾರಿಯಾಗಿದ್ದ ಫ್ರಾನ್ಸಿಸ್ ವೈಟ್ ಎಲ್ಲಿಸ್ ಅವರು ಜಗತ್ತಿನಲ್ಲಿ ಮೊಟ್ಟಮೊದಲನೆಯ ಬಾರಿಗೆ ಭಾಷೆಗಳ ತೌಲನಿಕ ಅಧ್ಯಯನ ಪ್ರಸ್ತಾಪವನ್ನು ಮಾಡಿದರು. ಎ.ಡಿ. ಕ್ಯಾಂಪಬೆಲ್‌ರ 'ತೆಲುಗು ಬಾಷಾ ವ್ಯಾಕರಣ' ಗ್ರಂಥಕ್ಕೆ ಬರೆದ ಸುದೀರ್ಘವಾದ ೩೨ ಪುಟಗಳ ಮುನ್ನುಡಿಯಲ್ಲಿ ಎಲ್ಲಿಸ್ ಅವರು ದ್ರಾವಿಡ ಭಾಷೆಗಳು ಸ್ವತಂತ್ರ ಭಾಷಾವರ್ಗಕ್ಕೆ ಸೇರುತ್ತವೆಂಬುದನ್ನು ಸೂಚಿಸಿದರು. ಅವರು ತಮಿಳು, ತೆಲುಗು, ಮಲೆಯಾಳಂ, ತುಳು, ಕೊಡುವ, ರಾಜಮಲ ಗುಡ್ಡಗಾಡು ಆದಿವಾಸಿಗಳ ಭಾಷೆಯಾದ ಮಾಲ್ತೊ ಹೀಗೆ ಒಟ್ಟು ೭ ಬಾಷೆಗಳನ್ನು ಗುರುತಿಸಿ ಈ ಘೋಷಣೆ ಮಾಡಿದರು. ದ್ರಾವಿಡ ಭಾಷೆಗಳು ಸಂಸ್ಕೃತದಿಂದ ಭಿನ್ನವಾದ ಬೇರೊಂದು ಸ್ವತಂತ್ರ ಗುಂಪಿಗೆ ಒಳಪಡುತ್ತವೆಯೆಂಬ ವಿಚಾರವು ಈಗ ಹಳೆಯದು. ದ್ರಾವಿಡ ಗುಂಪಿನ ಬಿಡಿ ಭಾಷೆಗಳ ಅಧ್ಯಯನ ಪಾಶ್ಚಾತ್ಯ ವಿದ್ವಾಂಸರಿಂದ ಕ್ರಿ.ಶ. ಹದಿನಾರನೆಯ ಶತಮಾನದಿಂದಲೂ ನಡದೇ ಇತ್ತು. ಕ್ರಿ.ಶ. ೧೫೫೧-೬೧ ರ ದಶಕದಲ್ಲಿ ಎಫ್. ಎಲ್ ಕಾಸ್ಟೆಂತೆದಾ ಎಂಬ ವಿದ್ವಾಂಸರು ಪೋರ್ಚುಗೀಸ್ ಭಾಷೆಯಲ್ಲಿ ಅನೇಕ ದ್ರಾವಿಡ ಭಾಷೆಗಳ ಬಗೆಗೆ ವಿವರಿಸಿದ್ದಾರೆ. ೧೭ ನೇಯ ಶತಮಾನದ ಮಧ್ಯಕಾಲದಲ್ಲಿಯೇ ಪೋರ್ಚುಗೀಸ್, ಡಚ್, ಲ್ಯಾಟಿನ್  ಭಾಷೆಗಳಲ್ಲಿ ತಮಿಳು ವ್ಯಾಕರಣಗಳು ರಚಿತವಾಗಿದ್ದವು. ಕ್ರಿ.ಶ. ೧೭೯೮ ರಲ್ಲಿ ಮಾಲ್ತೊದಂತಹ ಅಪ್ರಸಿದ್ದ ಭಾಷೆಯೂ ಬೆಳಕಿಗೆ ಬಂದಿತು. ೧೮೧೭ ರಲ್ಲಿ ವಿಲ್ಯಂಕ್ಯಾರಿ ಅವರು ಕನ್ನಡ ವ್ಯಾಕರಣ ರಚಿಸಿದರು. ೧೮೪೪ ರಲ್ಲಿ ಕಾಲ್ಡವೆಲ್‌ರಿಗಿಂತ ಮುಂಚೆಯೆ ಎಲ್ಲಿಸ್, ಆರ್.ಆರ್. ಸ್ಟಿವ್ಹನ್‌ಸನ್, ಆರ್. ಈ ರಾಬರ್ಟ್, ಅಲ್ಲದೆ ಸಮಕಾಲೀನರಾದ  ಸಿ. ರೋಸ್ಟ್. ವಾಲ್ಟರ್ ಎಲಿಯಟ್ ಮುಂತಾದವರು ಈ ನಿಟ್ಟಿನಲ್ಲಿ ಸ್ವಲ್ಪ ಕಾರ್ಯ ಮಾಡಿದ್ದರು.

ರಾಸ್ ಮಸ್ ರಾಸ್ಕ್ (೧೭೮೭-೧೮೩೨) ಎಂಬ ವಿದ್ವಾಂಸರು ಎಲ್ಲಿಸ್ ರ ಹೇಳಿಕೆಯನ್ನು ಎತ್ತಿಹಿಡಿದು ಅದೇ ಅಭಿಪ್ರಾಯವನ್ನು ಹೆಚ್ಚು ಖಚಿತಗೊಳಿಸಿದ್ದರು. ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯ (೧೮೩೮) ಅವರು 'ಹೊಸಗನ್ನಡ ನುಡಿಗನ್ನಡಿ ಎಂಬ ಹೊಸಗನ್ನಡ ವ್ಯಾಕರಣವನ್ನು  ಗ್ರಂಥ ರಚಿಸುವುದರ ಮೂಲಕ ದ್ರಾವಿಡ ಭಾಷೆಗಳ ಸಂಸ್ಕೃತದಿಂದ ಭಿನ್ನವೆಂದು ಸಾರಿದ ಪ್ರಥಮ ಭಾರತೀಯ, ಪ್ರಪ್ರಥಮ ಕನ್ನಡಿಗರೆನಿಸಿದ್ದಾರೆ. ರೆವ್ಹರೆಂಡ ರಾಬರ್ಟ್ ಕಾಲ್ಡವೆಲ್ (೧೮೧೮-೧೮೯೧) ಜಗತ್ತಿನಲ್ಲಿ ಇನ್ನೂ ತೌಲನಿಕ ಭಾಷಾಭ್ಯಾಸದ ಕಲ್ಪನೆಯೇ ಮೊಳಕೆಯೊಡೆಯದಿದ್ದ ಕಾಲದಲ್ಲಿ ೧೨ ದ್ರಾವಿಡ ಭಾಷೆಗಳು (ತಮಿಳು, ಮಲೆಯಾಳಂ, ತೆಲುಗು, ಕನ್ನಡ, ತುಳು, ಕೊಡಗು, ತೊದ, ಕೋತ, ಗೊಂಡಿ, ಕುಯಿ, ಕುರುಖ್ ಹಾಗೂ ಮಾಲ್ತೊ) ಗುರುತಿಸಿ ಅವುಗಳನ್ನು ವ್ಯವಸ್ಥಿತವಾಗಿ ಅಭ್ಯಸಿಸಿ ಮೌಲಿಕ ಗ್ರಂಥವನ್ನು (ತೌಲನಿಕ ವ್ಯಾಕರಣ) ರಚಿಸಿ, ತೌಲನಿಕ  ಭಾಷಾ ವಿಜ್ಞಾನದ ಪಿತಾಹಮರೆನಿಸಿಕೊಂಡರು. ೧೮೫೬ ರಲ್ಲಿ ಪ್ರಕಟಗೊಂಡ ಅವರ ದ್ರಾವಿಡ ಬಾಷೆಗಳ ತೌಲನಿಕ ವ್ಯಾಕರಣ ಗ್ರಂಥದಲ್ಲಿ ನಿರೂಪಿತವಾಗಿರುವ ಕೆಲವು ಸಿದ್ಧಾಂತಗಳು ಈಗ ಒಂದು ಶತಮಾನ ಗತಿಸಿಹೋದರೂ

ಹಾಗೆಯೇ ಉಳಿದಿರುವುದು ಗ್ರಂಥದ ಸಮಗ್ರತೆ, ಮೌಲ್ಯ, ಕಾಲ್ಡವೆಲ್‌ರ ನಿಶಿತಮತಿ ಖಚಿತ ನಿರ್ಣಯಗಳ ಅರಿವನ್ನುಂಟು ಮಾಡಿಕೊಡುತ್ತವೆ. ದ್ರಾವಿಡ ಭಾಷೆಗಳ ಅಧ್ಯಯನಕ್ಕೆ ಗಟ್ಟಿ ಬುನಾದಿ ಹಾಕಿದ ಕೀರ್ತಿ ಅವರದು. ಇವರಿಗೂ ಮುಂಚೆ ೧೮೪೪ ರಲ್ಲಿ ಕ್ರಿಸ್ತಿಯನ್ ಲಾಸೆನ್ ಎಂಬ ವಿದ್ವಾಂಸರು 'ದಖನ್' ಭಾಷೆಗಳ ಬಗೆಗೆ ಭಾಷಣ ಮಾಡಿ ಬ್ರಾಹು ಈ ದ್ರಾವಿಡ ವರ್ಗದ ಭಾಷೆ ಎಂದು ಘೋಷಿಸಿದರು. ೧೪೫೪ ರಲ್ಲಿ ಮ್ಯಾಕ್ಸ್ ಮುಲ್ಲರ್ ಕೂಡ ದ್ರಾವಿಡ ಭಾಷಾ ಕುಟುಂಬ ಸ್ವತಂತ್ರವೆಂದೇ ಪ್ರತಿಪಾದಿಸಿದ್ದರು.

ಗುಂಡರ್ಟ ಅವರ 'ಮಲಯಾಳ ಭಾಷಾ ವ್ಯಕರಣಂ' ೧೪೬೮ ರಲ್ಲಿ ಪ್ರಕಟವಾಯಿತು. ೧೮೭೨ ರಲ್ಲಿ ಅವರ ಮಲಯಾಳಂ ಕೋಶ ಬೆಳಕು ಕಂಡಿತು. ೧೯ನೆಯ ಶತಮಾನದ ಇತ್ತೀಚಿನ ವರುಷಗಳಲ್ಲಿ ಗುಂಡರ್ಟ ಹಾಗೂ ಕಿಟೆಲ್ ಇವರಿಗಿಂತ ಸ್ವಲ್ಪ ಮುಂಚೆ ವಿಲ್ಯಂ ಕ್ಯಾರಿ ಹಾಗೂ ಇನ್ನಿತರ ಕೆಲವು ವಿದ್ವಾಂಸರು ದ್ರಾವಿಡ ಭಾಷೆಗಳಿಂದ ಸಂಸ್ಕೃತವು ಸ್ವೀಕರಿಸಿದ ಪದಗಳ ಬಗೆಗೆ ಶೋಧನೆ ನಡೆಸಿ ಯಶಸ್ವಿಯಾದರು. ಕಿಟೆಲ್ಲರು ವ್ಯವಸ್ಥಿತವಾಗಿ ವರ್ಗೀಕರಿಸಿದ ದ್ರಾವಿಡದಿಂದ ಸಂಸ್ಕೃತಕ್ಕೆ ಹೋದ ೪೨೦ ಶಬ್ದಗಳ ಪಟ್ಟಿಯನ್ನು ತಮ್ಮ ಶಬ್ದಕೋಶದಲ್ಲಿ ನೀಡಿ ಸಂಸ್ಕೃತದಲ್ಲಿರುವ ದ್ರಾವಿಡ ಶಬ್ದಗಳನ್ನು ಗುರುತಿಸಲು ಅನುವಾಗುವ ಕೆಲವು ತತ್ವಗಳನ್ನು ನಿರೂಪಿಸಿದರು. ೧೮೯೪ ರಲ್ಲಿ ಪ್ರಕಟಗೊಂಡ ಕಿಟೆಲ್ ಕೋಶ ಕಾಲ್ಡವೆಲ್ಲರ ಅನಂತರದ ದ್ರಾವಿಡ ಭಾಷಾಧ್ಯಯನ ಕ್ಷೇತ್ರದ ಅತ್ಯಂತ ಗಮನಾರ್ಹ ಕೃತಿ. ಜ್ಯುಲಿಯನ್ ವಿನ್‌ಸನ್ ಅವರು ೧೮೭೭-೧೯೧೯ ರಲ್ಲಿ ದ್ರಾವಿಡ ಭಾಷೆಗಳ ಸ್ಥೂಲ ಗಣತಿಯನ್ನು ಮಾಡಿ ತೌಲನಿಕ ದ್ರಾವಿಡ ಧ್ವನಿಮಾ ಹಾಗೂ ಅಕೃತಿಮಾ ಶಾಸ್ತ್ರಗಳ ಬಗೆಗೆ ವಿವರಿಸಿದರು. ಭಾರತದ ಭಾಷೆಗಳ ಪರಿವೀಕ್ಷಣೆ ಗ್ರಿಯರ್‌ಸನ್‌ರ ನೇತೃತ್ವದಲ್ಲಿ ೧೯ನೆಯ ಶತಮಾನದ ಕೊನೆಕೊನೆಗೆ ಹಾಗೂ ೨೦ ನೆಯ ಶತಮಾನದ ಆರಂಭದಲ್ಲಿ ನಡೆದು ಭಾರತದ ಭಾಷೆಗಳ ಅಧ್ಯಯನಾಕಾಂಕ್ಷಿಗಳಿಗೆ ನವೀನ ಆಸಕ್ತಿಯನ್ನು ಹುಟ್ಟಿಸಿತು. ಭಾಷಾಭ್ಯಾಸದ ಕ್ಷೇತ್ರದಲ್ಲಿ ಹೊಸ ಬೆಳಕು ಬೀರಿತು. ಆದರೆ ದುರ್ದೈವದ ಸಂಗತಿಯೆಂದರೆ ಗ್ರಿಯರ್‌ಸನ್‌ರ ಬೃಹತ್ ಸಂಪುಟಗಳಲ್ಲಿ ನಾಲ್ಕನೆಯ ಸಂಪುಟ, ದ್ರಾವಿಡ ಭಾಷೆಗಳನ್ನು ಕುರಿತು ವಿವರಣೆಯನ್ನು ಹೊಂದಿದ್ದರೂ ದಕ್ಷಿಣ ಭಾರತದ ಬಹುಭಾಗವು ಪರಿವೀಕ್ಷಣೆಯಿಂದ ವಂಚಿತವಾಗಿರುವದು. ಇದು ಕಾರಣ ಸಮಗ್ರ ದ್ರಾವಿಡ ಭಾಷೆಗಳ ವಿವರಗಳ ಕೊರತೆ ಇಲ್ಲಿ ಸ್ಪಷ್ಟವಾಗಿ ಎದ್ದು ಕಾಣುತ್ತವೆ.

ಈ ಕಾಲದ ಚಟುವಟಿಕೆಗಳು ಕಾಲ್ಡವೆಲ್ಲರ ಸಿದ್ಧಾಂತಗಳಿಗೆ ಪುಷ್ಟಿ ನೀಡಿದುವಲ್ಲದೆ ಆ ನಿಟ್ಟಿನ ಮುಂದುವರಿದ ಅಧ್ಯಯನಕ್ಕೆ ಹೆಚ್ಚಿನ ನಿರ್ದಿಷ್ಟತೆ ತಂದುಕೊಟ್ಟವು.

## 2. ಮಧ್ಯಕಾಲ (ಕ್ರಿ.ಶ. ೧೯೦೬-೧೯೪೬)

೧೯೦೬ ದ್ರಾವಿಡ ಭಾಷಾ ಅಧ್ಯಯನ ಘಟದ ಮುಖ್ಯ ವರ್ಷ. ಈ ವೇಳೆಗೆ ಎಲ್‌ಎಸ್‌ಐ ಸಂಪುಟಗಳು ಹೊರಬಂದವು. ಎಲ್‌ಎಸ್‌ಐ ದಲ್ಲಿ ಹಲವು ದ್ರಾವಿಡ ಭಾಷೆಗಳು ಪ್ರಥಮ ಬಾರಿಗೆ ದಾಖಲಾದವು. ಕ್ರಿ.ಶ. ೧೯೦೬-೧೯೪೬ ರ ವರೆಗಿನ ದ್ರಾವಿಡ

ಭಾಷೆಗಳ ಅಧ್ಯಯನದ ಇತಿಹಾಸ ಹೆಚ್ಚು ಚಟುವಟಿಕೆಗಳಿಂದ ಕೂಡಿದೆ. ಈ ಅವಧಿಯಲ್ಲಿ ವಿದೇಶಿ ಹಾಗೂ ಭಾರತೀಯ ವಿಜ್ಞಾನಿಗಳೂ ಗಮನಾರ್ಹವಾದ ಸೇವೆ ಸಲ್ಲಿಸಿದ್ದಾರೆ. ಎಲ್.ವಿ. ರಾಮಸ್ವಾಮಿ ಅಯ್ಯರ್, ಕೆ.ವಿ. ಸುಬ್ಬಯ್ಯ, ಆರ್. ನರಸಿಂಹಾಚಾರ್ಯ, ಜೂಲ್ಸಬ್ಲಾಕ್ ಆಲ್‌ಫ್ರೆಡ್ ಮಾಸ್ಟರ್, ಈ. ಎಚ್. ಟಟಲ್, ಎಂ.ಬಿ. ಎಮಿನೊ, ಟಿ.ಬರೊ,ಮುಂತಾದವರನ್ನು ಇಲ್ಲಿ ಸ್ಮರಿಸಬೇಕು.

೧. ದ್ರಾವಿಡ ಭಾಷೆಗಳ ಜ್ಞಾತಿಪದಗಳನ್ನು ಹುಡುಕಿ, ಮೂಲದ್ರಾವಿಡ ರೂಪಗಳನ್ನು ಗುರುತಿಸುವುದು.

೨. ಸಂಸ್ಕೃತ ಹಾಗೂ ಏಶಿಯಾದ ಇತರ ಭಾಷೆಗಳೊಡನೆ ದ್ರಾವಿಡ ಭಾಷೆಗಳ ಸಂಬಂಧವನ್ನು ಹುಡುಕುವುದು.

೩. ಗ್ರಂಥಸ್ಥ ಭಾಷೆಗಳ ವ್ಯಾಕರಣ ರಚಿಸುವದು.

೪. ಹೊಸದಾಗಿ ಸಂಶೋಧಿಸಲ್ಪಟ್ಟ ದ್ರಾವಿಡ ಭಾಷೆಗಳ ಅಧ್ಯಯನ ಕೈ ಕೊಳ್ಳುವದು.

ಈ ಮುಂತಾದ ಕಾರ್ಯಗಳನ್ನು ಕೈಗೆತ್ತಿಕೊಂಡು ಈ ವಿದ್ವಾಂಸರು ಅಧ್ಯಯನವನ್ನು ಚುರುಕುಗೊಳಿಸಿದರು.

ಕೆ.ವ್ಹಿ. ಸುಬ್ಬಯ್ಯ ಅವರು ದ್ರಾವಿಡ ಭಾಷೆಗಳ ತೌಲನಿಕ ಧ್ವನಿಮಾ ಶಾಸ್ತ್ರವನ್ನು ಕಾಲ್ಡವೆಲ್‌ರಿಗಿಂತ ಹೆಚ್ಚು ಖಚಿತವಾಗಿ ನಿರೂಪಿಸಲು ಯತ್ನಿಸಿದರಲ್ಲದೆ ಇ/ಎ, ಉ/ಒ ; ಕ >ಚ್ ; ಪ > ಹ ವರ್ಣಪಲ್ಲಟ ; ಸ್ವರಾನುರೂಪತೆ ; ಮೂಲ ದ್ರಾವಿಡದ ಕೆಲವು ರೂಪಗಳು ಇವೇ ಮುಂತಾದ ಅನೇಕ ವಿಚಾರಗಳನ್ನು ಬಿಡಿಬಿಡಿಯಾಗಿ ವಿವೇಚಿಸಿದ್ದಾರೆ. ಕ್ರಿ.ಶ. ೧೯೨೩-೧೯೫೦ ರ ವೇಳೆಯಲ್ಲಿ ರಾಮಸ್ವಾಮಿ ಅಯ್ಯರ್ ಅವರು ದ್ರಾವಿಡ ಭಾಷೆಗಳ ಅಧ್ಯಯನಕ್ಕೆ ಸಂಬಂಧಿಸಿ ನೂರಾರು ಉನ್ನತ ಮಟ್ಟದ ಲೇಖನ ಹಾಗೂ ಮಲೆಯಾಳಂ ಆಕೃತಿಮಾಶಾಸ್ತ್ರದ ಬಗೆಗಿನ ಎರಡು ಪುಸ್ತಕಗಳನ್ನು ಪ್ರಕಟಿಸಿ, ಈ ಕ್ಷೇತ್ರದಲ್ಲಿ ಮರೆಯಲಾಗದ ಸೇವೆಯನ್ನು ಸಲ್ಲಿಸಿದ್ದಾರೆ. ಇಂಗ್ಲೆಂಡ್ ದೇಶದ ಥಾಮಸ್ ಬರೊ ಅವರ ಹೆಸರು ದ್ರಾವಿಡ ಭಾಷೆಗಳ ಅಧ್ಯಯನದ ಕ್ಷೇತ್ರದಲ್ಲಿ ಅಜರಾಮರವಾಗಿದೆ. ದ್ರಾವಿಡ ಭಾಷೆಗಳ ತೌಲನಿಕ ಧ್ವನಿಮಾಶಾಸ್ತ್ರದ ಅಭ್ಯಾಸ ಹೆಚ್ಚು ನಿರ್ದಿಷ್ಟ ರೀತಿಯಲ್ಲಿ ಇವರಿಂದಲೇ ಪ್ರಾರಂಭವಾಯಿತೆನ್ನಬೇಕು. ಈ ಕ್ಷೇತ್ರದ ಘನವಿದ್ವಾಂಸರಲ್ಲಿ ಕೆಲಿಫೋರ್ನಿಯಾದ ಎಮಿನೊ ಅವರೂ ಒಬ್ಬರು. ನೀಲಗಿರಿ ಜನಾಂಗದ ಭಾಷೆಯ ಅಭ್ಯಾಸ ಇವರಿಂದ ನಡೆದಿದೆ. ಬರೊ, ಎಮಿನೊ ಇವರು ಪ್ರಪ್ರಥಮವಾಗಿ ದ್ರಾವಿಡ ಭಾಷೆಗಳ ಶಬ್ದೋತ್ಪತ್ತಿಕೋಶವನ್ನು (Etymological Dicitonary) ರಚಿಸಿ ದ್ರಾವಿಡ ಭಾಷೆಗಳ ಅಭ್ಯಾಸಕ್ಕೆ ಹೊಸ ಅವಕಾಶವನ್ನು ತೆರೆದಿಟ್ಟರು. ದ್ರಾವಿಡ ಭಾಷಾ ಬ್ಯಾಸವನ್ನು ಮನಮುಟ್ಟ ಮಾಡಿದ ಬೆರಳೆಣಿಕೆಗೆ ನಿಲ್ಲುವ ಪ್ರಕಾಂಡ ಪಂಡಿತರಲ್ಲಿ ಬರೊ ಹಾಗೂ ಎಮಿನೊ ಎದ್ದು ಕಾಣುವ ಹೆಸರುಗಳು.

ಒಟ್ಟನಲ್ಲಿ ಸ್ವಾತಂತ್ರ್ಯ ಪೂರ್ವಕಾಲೀನ ೪-೫ ದಶಕಗಳಲ್ಲಿ ದ್ರಾವಿಡ ಭಾಷೆಗಳಿಗೆ ಸಂಬಂಧಿಸಿದ ಪ್ರಮುಖ ಧ್ವನಿಮಾ ಸಮಸ್ಯೆಗಳನ್ನು ಚರ್ಚಿಸಿದುದಲ್ಲದೆ ಆಕೃತಿಮಾ ಶಾಸ್ತ್ರಕ್ಕೂ ಸಂಬಂಧಿಸಿದ ಅನೇಕ ಸಮಸ್ಯೆಗಳನ್ನು ವಿವರಿಸಲಾಯಿತು. ಭಾಷೆಗಳ ಪರಸ್ಪರ ತೌಲನಿಕ ಅಧ್ಯಯನವೂ ಮುಂದುವರಿಯಿತು.

### 3. ಆಧುನಿಕ ಕಾಲ (೧೯೪೬-೨೦೦೦)

ಭಾರತ ಸ್ವಾತಂತ್ರ್ಯ ನಂತರ ಪ್ರಾಂತೀಯ ಭಾಷೆಗಳಿಗೆ, ಹೆಚ್ಚಿನ ಮಹತ್ವ ಪ್ರಾಪ್ತವಾಗತೊಡಗಿತು. ಭಾರತೀಯ ಭಾಷಾ ವಿಜ್ಞಾನಿಗಳು ಭಾಷಾಭ್ಯಾಸದೆಡೆಗೆ ವಿಶೇಷ ಗಮನಹರಿಸಿದರು. ಎಸ್. ಭಟ್ಟಚಾರ್ಯ, ಭದ್ರಿರಾಜು ಕೃಷ್ಣಮೂರ್ತಿ, ಎಸ್.ವಿ. ಷಣ್ಮುಗಂ, ಟಿ.ಪಿ. ಮೀನಾಕ್ಷಿಸುಂದರನ್, ಪಿ.ಎಸ್. ಸುಬ್ರಮಣ್ಯಂ, ಕಮೀಲ್ ಜ್ವಲೇಬಿಲ್ ಎಂ. ಆ್ಯಂಡ್ರೋನೋವ್, ವಿಲಿಯಂ ಬ್ರೈಟ್ ಮುಂತಾದ ಹಲವಾರು ಭಾರತೀಯ ಹಾಗೂ ವಿದೇಶಿ ದ್ರಾವಿಡ ಭಾಷಾ ವಿಜ್ಞಾನಿಗಳನ್ನಿಲ್ಲಿ ಹೆಸರಿಸಬಹುದು.

ಭ. ಕೃಷ್ಣಮೂರ್ತಿಯವರ Telugu Verbal Bases . ಎಂಬ ಮಹಾಪ್ರಬಂಧ ೧೯೬೧ ರಲ್ಲಿ ಪ್ರಕಟಗೊಂಡು ದ್ರಾವಿಡ ಭಾಷೆಗಳ ತೌಲನಿಕ ಅಧ್ಯಯನದ ಕ್ಷೇತ್ರದಲ್ಲಿ ಹೊಸ ಕ್ಷಿತಿಜವನ್ನು ತೆರೆಯಿತು. ತೆಲುಗು ಭಾಷೆಯನ್ನು ಪ್ರಧಾನವಾಗಿಟ್ಟುಕೊಂಡು ಇಡೀ ದ್ರಾವಿಡಭಾಷೆಗಳ ಆಕೃತಿಮಾ ವಿಭಾಗದ ವಿವರವಾದ ತೌಲನಿಕ ವಿವೇಚನೆಯನ್ನು ಪ್ರಬಂಧದಲ್ಲಿ ನೀಡಲಾಗಿದೆ.

ಬರೋ ಹಾಗೂ ಭಟ್ಟಾಚಾರ್ಯರು ಜೊತೆಗೂಡಿ ಪರ್ಜಿ, ಗೊಂಡಿ, ಪೆಂಗೊ ಮುಂತಾದ ಭಾಷೆಗಳ ಬಗೆಗೆ ಅಧ್ಯಯನ ನಡೆಸಿ ಉಪಯುಕ್ತ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಅಣ್ಣಾಮಲೈ ವಿಶ್ವವಿದ್ಯಾಲಯದ ಪ್ರಕಟವಾದ ಎಸ್.ವಿ. ಷಣ್ಮುಗಂ ಅವರ ದ್ರಾವಿಡ ನಾಮಪದಗಳ ತೌಲನಿಕ ಅಧ್ಯಯನ ಹಾಗೂ ಅವರ ದ್ರಾವಿಡ ನಾಮಪದಗಳ ತೌಲನಿಕ ಅಧ್ಯಯನ ಅವುಗಳಲ್ಲಿ ಹೆಸರಿಸಬೇಕಾದ ಕೃತಿಗಳು. ಕಮೀಲ್‌ಜ್ವಲೆಬಿಲ್ ಅವರ ತೌಲನಿಕ ದ್ರಾವಿಡ ಧ್ವನಿಮಾ ಹಾಗೂ ಆಕೃತಿಮಾ ಶಾಸ್ತ್ರಗಳಿಗೆ ಸಂಬಂಧಿಸಿದ ಗ್ರಂಥಗಳು ಈ ದಶಕಗಳ ಉತ್ತಮ ಕಾಣಿಕೆಗಳು. ಈಗ ದ್ರಾವಿಡ ಭಾಷಾ ವ್ಯಾಸಂಗವನ್ನು ಹತ್ತಾರು ಕಡೆಗೆ ಹಲವಾರು ರೀತಿಯಿಂದ ಹಿರಿಕಿರಿಯ ವಿದ್ವಾಂಸರೆಲ್ಲ ಅಮಿತ ಉತ್ಸಾಹದಿಂದ ಮುನ್ನೆಡೆಯಿಸಿದ್ದಾರೆ, ಈ ವರೆಗಾದ ಸಾಧನೆಯ ಪರಿಚಯವನ್ನು ಸಮಗ್ರವಾಗಿ ನೀಡುವುದು ಈ ಗ್ರಂಥದ ಪರಿಮಿತಿಗೆ ಸಾಧ್ಯವಾದುದಲ್ಲ. ಪ್ರಕಟವಾದ ಮಹತ್ವದ ಕೃತಿಗಳ ಪಟ್ಟಿಯನ್ನು ಇದರ ಬಗೆ ಆಳವಾದ ಅಧ್ಯಯನ ನಡೆಯಬೇಕಿದೆ.

ಕ್ರಿ.ಶ. ೧೯೯೦ ಹಾಗೂ ಅನಂತರದ ಕೆಲ ವರ್ಷಗಳಲ್ಲಿ ಪ್ರಕಟವಾದ ದ್ರಾವಿಡ ವಿಶ್ವಕೋಶಗಳು ಈ ನಿಟ್ಟಿನಲ್ಲಿ ಅತ್ಯಂತ ಗಮನಾರ್ಹವಾದವುಗಳು, ದ್ರಾವಿಡಕ್ಕೆ ಸಂಬಂಧಿಸಿದ ಏನೆಲ್ಲ ವಿವರಗಳನ್ನು ಒಳಗೊಂಡಿರುವ ಇವು ಅಧ್ಯಯನ ಶೀಲರಿಗೆ ಉತ್ತಮ ಸಾಮಗ್ರಿ ಒದಗಿಸಿವೆ.

ಶಬ್ದೋತ್ಪತ್ತಿಶಾಸ್ತ್ರದ ವಿಭಾಗದಲ್ಲಂತೂ ತೀರ ಕಡಿಮೆ ಅಧ್ಯಯನ ನಡೆದಿದೆ. ಭಾಷೆಗಳ ತೌಲನಿಕ ಅದ್ಯಯನಕ್ಕೆ ಶಬ್ದೋತ್ಪತ್ತಿ ಅಭ್ಯಾಸವೇ ಮೂಲ ತಳಹದಿಯಾಗಿದೆ. ಒಂದು ಭಾಷೆಯ ಒಂದು ಶಬ್ದ, ಇತರ ಸಹೋದರ ಭಾಷೆಗಳಲ್ಲಿ ಯಾವ ರೂಪ ಹಾಗೂ ಯಾವ ಅರ್ಥದಲ್ಲಿ ಬಳಕೆಯಾಗುತ್ತದೆ? ಶಬ್ದದ ಮೂಲರೂಪ ಯಾವುದು? ಎಂಬ ಸಂಗತಿಗಳು ಗೊತ್ತಿದ್ದರೆ ಭಾಷೆಗಳ ತೌಲನಿಕ ಅಧ್ಯಯನ ಬಹಳಷ್ಟು ಸರಳಗೊಳ್ಳುತ್ತದೆ. ಶಬ್ದೋತ್ಪತ್ತಿ ವಿಭಾಗದಲ್ಲಿ ಹೊರಬಂದಿರುವ

ಅತ್ಯಮೂಲ್ಯ ದ್ರಾವಿಡ ಶಬ್ದೋತ್ಪತ್ತಿ ಕೋಶವೆಂದರೆ "Dravidian Etymological Dictionary ". ೧೯೬೧ ರಲ್ಲಿ Oxford . ವಿಶ್ವವಿದ್ಯಾಲಯದಿಂದ ಪ್ರಕಟಿಸಲ್ಪಟ್ಟ ಈ ದ್ರಾವಿಡ ಭಾಷಾ ಶಬ್ದೋತ್ಪತ್ತಿಕೋಶ ಈ ನಿಟ್ಟನಲ್ಲಿ ಸಂಸ್ಮರಣೀಯ ಗ್ರಂಥ ಬರೋ ಹಾಗೂ ಎಮಿನೊ ಅವರು ಸಂಪಾದಿಸಿದ ಈ ಗ್ರಂಥ, ದ್ರಾವಿಡ ಭಾಷಾ ಶಾಸ್ತ್ರದ ಅಭ್ಯಾಸಿಗಳಿಗೊಂದು ಕಾಮದೇನುವಿನಂತಿದೆ. ಪುರವಮಿ ಸೇರಿ ಒಟ್ಟು ೪೯೦ಲ ಶಬ್ದಗಳನ್ನು ಇದರಲ್ಲಿ ವಿವರಿಸಲಾಗಿದೆ. ಎಲ್ಲ ಹಂತಗಳ ಕೆಲಸವನ್ನು ಅತ್ಯಂತ ದಕ್ಷತೆಯಿಂದ ವ್ಯವಸ್ಥಿತವಾಗಿ ನಿರ್ವಹಿಸಿರುವುದು ಈ ಗ್ರಂಥದ ಘನತೆಯನ್ನು ಹೆಚ್ಚಿಸಿದೆ. ಈ ಗ್ರಂಥವನ್ನು ಬಿಟ್ಟರೆ ೧೨೩೬ ಕ್ರಿಯಾಪ್ರಕೃತಿ (Verbal Bases) ಗಳನ್ನು ತೌಲನಿಕವಾಗಿ ವಿವೇಚಿಸಿರುವ ಕೃಷ್ಣಮೂರ್ತಿ ಅವರ ಮಹಾಪ್ರಬಂಧ ಮದ್ರಾಸ ವಿಶ್ವವಿದ್ಯಾಲಯ ಪ್ರಕಟಿಸಿರುವ ಕೆ. ರಾಮುಕೃಷ್ಣಯ್ಯ ಅವರ Dravidian congnates ಎಂಬಗ್ರಂಥ ಮತ್ತು ಕೆಲವು ಬಿಡಿ ಲೇಖನಗಳು ಇವಿಷ್ಟು ಈ ಕ್ಷೇತ್ರದಲ್ಲಿ ನಡೆದಿರುವ ಚಟುವಟಿಕೆಗಳು.

ದ್ರಾವಿಡ ಭಾಷಾ ಸಂಬಂಧಗಳ ಬಗೆಗೆ ಬರೋ ಅವರ Dravidian Studies VII . ಬಿಟ್ಟರೆ ಬಿಡಿ ಲೇಖನಗಳು ಬಂದಿರುವುದಷ್ಟೇ ಈ ಕ್ಷೇತ್ರದ ಆಸ್ತಿ. ದ್ರಾವಿಡ ಬಾಷಾ ವರ್ಗೀಕರಣದ ಬಗೆಗೂ ವಿಶೇಷ ಅಧ್ಯಯನ ಇನ್ನೂ ನಡೆದಿಲ್ಲ. ರಾಮಸ್ವಾಮಿ ಅಯ್ಯರ್, ಟಟಲ್, ಬರೊ, ಕೃಷ್ಣಮೂರ್ತಿ, ಎಮಿನೊ, ಸ್ಪೆನ್‌ಕೊನೊ, ಸುಬ್ರಮಣ್ಯಂ ಮುಂತಾದ ವಿಜ್ಞಾನಿಗಳು ದ್ರಾವಿಡ ಭಾಷೆಗಳನ್ನು ಉಪವಿಭಾಗೀಕರಣ ಮಾಡಲು ಮೊದಲು ಯತ್ನಿಸಿದರು. ಸ್ಥೂಲವಾಗಿ ದ್ರಾವಿಡ ಭಾಷೆಗಳನ್ನು ದಕ್ಷಿಣ ದ್ರಾವಿಡ, ಮಧ್ಯ ದ್ರಾವಿಡ, ಉತ್ತರದ್ರಾವಿಡ ಎಂದು ವರ್ಗೀಕರಿಸಿದ್ದಾರೆ. ಈ ವರ್ಗೀಕರಣದಲ್ಲಿ ಖಚಿತವಾಗಿ ಒಳಗೊಳ್ಳುವ ಭಾಷೆಗಳಾವುವು ಎಂಬ ಬಗೆಗೆ ಇನ್ನೂ ಹೆಚ್ಚಿನ ಸಂಶೋಧನೆ ನಡೆಯಬೇಕಾಗಿದೆ.

ಭಾರತೀಯೇತರ ಭಾಷಾವರ್ಗಗಳೊಂದಿಗೆ ದ್ರಾವಿಡ ಭಾಷಾಪರಿವಾರದ ಸಂಬಂಧವನ್ನು ಕಲ್ಪಿಸುವ ಹಲವು ಪ್ರಯತ್ನಗಳು ನೂರು ವರ್ಷಗಳಿಂದಲೂ ನಡೆದಿವೆ. ಉರಲ್ ಅಲ್ತಾಯಿಯ 'ಸಿಥಿಯನ್' ಅಥವಾ ಥುರೇನಿಯನ್ ಭಾಷಾಪರಿವಾರ ದೊಂದಿಗೆ ದ್ರಾವಿಡಭಾಷೆಗಳ ಸಂಬಂಧವನ್ನು ಕಾಲ್ಡ್‌ವೆಲ್ ಅವರು ಹೊಂದಿಸಿದುದನ್ನು ಬರೊ ಮುಂತಾದ ವಿದ್ವಾಂಸರು ಸಮರ್ಥಿಸಿದ್ದಾರೆ. ಆದರೆ ಒಂದೆರಡು ಧ್ವನಿ ವ್ಯತ್ಯಾಸದ ಹೋಲಿಕೆ ಮಾತ್ರದಿಂದ ಎರಡು ಭಾಷಾಪರಿವಾರಗಳ ಸಂಬಂಧವನ್ನು ನಿರ್ದಿಷ್ಟ ಪಡಿಸಬಹುದೇ? ಎಂಬ ಸಂಶಯ ಉಳಿದೇ ಉಳಿಯುತ್ತದೆ. ಮೆಡಿಟರೇನಿಯನ್ ಹಾಗೂ ಭಾಸ್ಕ್ ಭಾಷಾ ಪರಿವಾರದೊಂದಿಗೆ ದ್ರಾವಿಡ ಭಾಷೆಗಳ ಸಂಬಂಧವನ್ನು ಹೊಂದಿಸಲೆತ್ನಿಸಿರುವುದೂ ಗಮನಾರ್ಹವಾಗಿದೆ. ಕಾಕೇಶಿಯನ್, ಕೋರಿಯನ್, ಇಜಿಪ್ತಿಯನ್‌ಹಾಗೂ ಸುಮೇರಿಯನ್ ಭಾಷಾ ಕುಟುಂಬಗಳೊಂದಿಗೂ ದ್ರಾವಿಡ ಭಾಷೆಗಳ ಸಂಬಂಧ ಕಲ್ಪಿಸಲು ಯತ್ನಿಸಿರುವುದು ಕಂಡುಬರುತ್ತದೆ. ಮುಂಡಾ ವರ್ಗದೊಡನೆ ಹೋಲಿಸಲೂ ಯತ್ನ ನಡೆದಿದೆ. ಕಲ್ಪಿಸಲೂ ಪ್ರಯತ್ನಿಸಲಾಗಿದೆ. ಒಟ್ಟನಲ್ಲಿ ಈವರೆಗೂ ದ್ರಾವಿಡ ಬಾಷೆಗಳು ಜಗತ್ತಿನ ಯಾವ ಭಾಷಾ ಕುಟುಂಬಕ್ಕೆ ಹೆಚ್ಚು ಸಮೀಪವಾಗಿವೆಂಬ ವಿಚಾರ ಇನ್ನೂ ಸ್ಪಷ್ಟವಾಗಿಲ್ಲ.

ಈವರೆಗೂ ದ್ರಾವಿಡ ಭಾಷೆಗಳನ್ನು ಕುರಿತು ನೂರಾರು ಅಭ್ಯಾಸಪೂರ್ಣ ಲೇಖನಗಳು, ಪುಸ್ತಕಗಳು ಬರೆಯಲ್ಪಟಿದ್ದರೂ

ಸುಮಾರು ಎರಡು ಶತಮಾನಗಳ ದ್ರಾವಿಡ ಭಾಷೆಗಳ ಅಭ್ಯಾಸ ತೀರ ಕಡಿಮೆ ಪ್ರಮಾಣದಲ್ಲಿ ಆಗಿದೆಯೆಂದೇ ಭಾವಿಸಬೇಕಾಗುತ್ತದೆ. ಇತ್ತೀಚೆಗೆ ಭಾರತದ ಹಾಗೂ ವಿದೇಶಗಳ ವಿಶ್ವವಿದ್ಯಾಲಯಗಳಲ್ಲಿ ದ್ರಾವಿಡ ಭಾಷೆಗಳ ಅಧ್ಯಯನ ವ್ಯವಸ್ಥಿತವಾಗಿ ನಡೆಯುತ್ತಿರುವುದು ಸಮಾಧಾನಕರವಾದ ಸಂಗತಿ. ವಿದೇಶಗಳಲ್ಲಿ ದ್ರಾವಿಡ ಭಾಷಾ ಪಂಡಿತರ ಸಂಖ್ಯೆ ಕಡಿಮೆಯಿದ್ದರೂ ಅವರು ಸಲ್ಲಿಸಿರುವ ಸೇವೆ ಸ್ಮರಣೀಯವಾಗಿದೆ. ಹಾಲ್ಮಂಡ್‌ನ ಕಮೀಲ್ ಜ್ವಲೇಬಿಲ್, ರಶಿಯಾದ ಆ್ಯಂಡ್ರೋನೋವ್, ಇಂಗ್ಲೆಂಡಿನ ಬರೊ, ಅಮೇರಿಕಾದ ಎಮಿನೊ ಹಾಗೂ ಸೌತವರ್ತ ಮುಂತಾದ ಪ್ರಥಮ ದರ್ಜೆಯ ವಿದೇಶಿ ಪಂಡಿತರು ಹಾಗೂ ಭಾರತೀಯರಲ್ಲಿ ಮೀನಾಕ್ಷಿಸುಂದರನ್, ಸುಬ್ರಹ್ಮಣ್ಯಂ, ಕೃಷ್ಣಮೂರ್ತಿ, ಶಂಕರ್, ಭಟ್ಟಾಚಾರ್ಯ, ಆಗಸ್ತ್ಯಲಿಂಗಂ, ನರಸಿಂಹಾಚಾರ್ಯ, ತೀನಂ ಶ್ರೀ ಮುಂತಾದವರಲ್ಲದೆ ತರುಣ ಪೀಳಿಗೆಯ ಹಲವಾರು ವಿದ್ವಾಂಸರು ದ್ರಾವಿಡ ಭಾಷಾ ವ್ಯಾಸಂಗದಲ್ಲಿ ಗಮನಾರ್ಹ ಪ್ರಗತಿ ತೋರಿಸಿದ್ದಾರೆ. ಮಧ್ಯದ್ರಾವಿಡ ಹಾಗೂ ಉತ್ತರ ದ್ರಾವಿಡ ಭಾಷೆಗಳ ವಿವರವಾದ ಅಧ್ಯಯನದ ಅವಶ್ಯಕತೆ ಬಹಳವಿದೆ. ಪ್ರತಿಯೊಂದು ದ್ರಾವಿಡ ಭಾಷೆಗಳ ಧ್ವನಿಮಾ, ಆಕೃತಿಮಾ ಹಾಗೂ ವಾಕ್ಯ ವಿಜ್ಞಾನ ಮೂರೂ ವಿಭಾಗದಲ್ಲಿ ಸಾಕಷ್ಟು ಕೆಲಸ ನಡೆಯಬೇಕಾಗಿದೆ. ಪ್ರಮುಖ ಉಪಭಾಷೆಗಳ ಶಬ್ದಕೋಶಗಳೂ, ವರ್ಣನಾತ್ಮಕ, ಐತಿಹಾಸಿಕ ವ್ಯಾಕರಣಗಳೂ ಅತ್ಯವಶ್ಯಕವಾಗಿವೆ. ಇತ್ತೀಚೆಗೆ ಗುರುತಿಸಲ್ಪಟ್ಟಿರುವ ಗ್ರಾಂಥಿಕವಲ್ಲದ (ಶ್ರಾವಣ) ಭಾಷೆಗಳ ವ್ಯವಸ್ಥಿತ ಅಧ್ಯಯನ ದ್ರಾವಿಡ ಭಾಷೆಗಳ ಬಗೆಗಿನ ಹೆಚ್ಚಿನ ಸಂಶೋಧನೆಗೆ ಎಡೆ ಮಾಡಿಕೊಡುತ್ತಿದೆ.

ಉಪ ಭಾಷಾ ಪರಿವೀಕ್ಷಣೆ ಮಾಡುವ ಪ್ರಯತ್ನಗಳು ವಿಶ್ವವಿದ್ಯಾಲಯಗಳ ಪರಿಣತರಿಂದ, ಬಾಷಾಭಿವೃದ್ಧಿ ಸಂಸ್ಥೆಗಳಿಂದ ಈಗ ನಡೆದಿದೆ.ದಕ್ಷಿಣ ಭಾರತದ ಎಲ್ಲಾ ವಿಶ್ವವಿದ್ಯಾಲಯಗಳು, ವಿವಿಧ ಸಾಹಿತ್ಯ ಪರಿಷತ್ತುಗಳು ಹಾಗೂ ಅಕಾಡೆಮಿಗಳು, ಮದ್ರಾಸಿನಲ್ಲಿರುವ ಓರಿಯಂಟಲ್ ಸಂಶೋಧನಾ ಸಂಸ್ಥೆ, ಅಣ್ಣಾಮಲೈ ವಿಶ್ವವಿದ್ಯಾಲಯದಲ್ಲಿರುವ ಭಾಷಾ ವಿಜ್ಞಾನ ಪ್ರೌಢ ಅಧ್ಯಯನ ಸಂಸ್ಥೆ, ಪುಣೆಯ ಡೆಕ್ಕನ್ ಕಾಲೇಜು, ತ್ರಿವೇಂಡ್ರನಲ್ಲಿರುವ ದ್ರಾವಿಡಭಾಷಾ ವಿಜ್ಞಾನ ಸಂಸ್ಥೆ ಮೈಸೂರಿನಲ್ಲಿರುವ ಭಾರತೀಯ ಭಾಷಾಧ್ಯಯನ ಸಂಸ್ಥೆ ಇತ್ಯಾದಿ ಸಂಘಸಂಸ್ಥೆಗಳು ದ್ರಾವಿಡ ಭಾಷೆಗಳಿಗೆ ಸಂಬಂಧಿಸಿದ ಸಂಶೋಧನೆ, ಪ್ರಕಟಣೆ ಮುಂತಾದವುಗಳನ್ನು ವ್ಯಾಪಕವಾಗಿ ಹಮ್ಮಿಕೊಂಡಿವೆ. ಲ್ಯಾಂಡಿನ ಉತ್ರೆಚ್ ವಿಶ್ವವಿದ್ಯಾಲಯದಲ್ಲಿ 'ದ್ರವಿಡಾಲೊಜಿ' ಎಂಬ ಅಧ್ಯಯನಪೀಠ ಸ್ಥಾಪಿತವಾಗಿದೆ. ದಕ್ಷಿಣ ಭಾರದ ಕುಪ್ಪಂನಲ್ಲಿ ದ್ರಾವಿಡ ಭಾಷಾ ವಿಶ್ವವಿದ್ಯಾಲಯ ಸ್ಥಾಪನೆಗೊಂಡಿದೆ. ದ್ರಾವಿಡಬಾಷಾ ಅಧ್ಯಯನ ಸಂಶೋಧನೆಗಳಿಗೆ ಸಂಬಂಧಿಸಿದ ಲೇಖನಗಳನ್ನು ಪ್ರಕಟಿಸುವ International Journal of Dravidian Linguistics ಎಂಬ ಪತ್ರಿಕೆ (ಅಂತರಾಷ್ಟ್ರೀಯ ದ್ರಾವಿಡಭಾಷಾ ಸಂಸ್ಥಾನ ತ್ರಿವೇಂಡ್ರಂ) ನಿಯತವಾಗಿ ಪ್ರಕಟಗೊಳ್ಳುತ್ತಿದೆ. ಡಾ॥ ಆರ್.ಸಿ. ಹಿರೇಮಠ ಅವರು The Genesis and Growth of Dravidian ಎಂಬ ಅತ್ಯುತ್ತಮ ಸಂಶೋದನೆ ಗ್ರಂಥವನ್ನು ರಚಿಸಿದ್ದು International School of Dravidian Linguistics ನಿಂದ ಪ್ರಕಟಗೊಂಡಿದೆ. ಇದರಲ್ಲಿ ದ್ರಾವಿಡ ಜನಾಂಗ ಹಾಗೂ ಅವರ ಸಂಪರ್ಕ ಸಂಬಂಧಗಳ ದೀರ್ಘ ವಿವರಣೆ ಇದೆ. ಮುಂದಿನ ದಿನಗಳು ದ್ರಾವಿಡ ಭಾಷಾಭ್ಯಾಸದ ಕ್ಷೇತ್ರದಲ್ಲಿ ಆಶಾದಾಯಕವಾಗಿದೆ.

## ದ್ರಾವಿಡ ಭಾಷೆಗಳು

### 1. ದಕ್ಷಿಣ ದ್ರಾವಿಡ ಭಾಷೆಗಳು :

ಈ ವರ್ಗದಲ್ಲಿ ತಮಿಳು, ಮಲೆಯಾಳಂ, ಕೋತ, ತೊದ, ಇರುಳ, ಕುರುಂಬ,ಕನ್ನಡ, ಬಡಗ, ಕೊಡಗು, ಹವ್ಯಕ, ಸೋಲಿಗ, ಕುರುಬ, ನಾಡವರ್, ತುಳು, ವಡ್ಡರಿ, ತೆಲುಗು, ಇನ್ನು ಮುಂತಾದ ಭಾಷೆಗಳು ಮುಖ್ಯವಾಗಿದೆ. ಇವು ದಕ್ಷಿಣ ಭಾರತದ ಬೇರೆ ಬೇರೆ ಭಾಗಗಳಲ್ಲಿ ಬಳಕೆಯಲ್ಲಿರುವುದರಿಂದ ಇವುಗಳನ್ನು ಭೌಗೋಳಿಕವಾಗಿ ದಕ್ಷಿಣ ದ್ರಾವಿಡ ಭಾಷೆಗಳನ್ನುತ್ತಾರೆ. ಇದರಲ್ಲಿ ತಮಿಳು, ಮಲೆಯಾಳಂ, ಕನ್ನಡ, ತೆಲುಗು ಭಾಷೆಗಳು ಹೆಚ್ಚು ಪ್ರಾಚೀನ ಹಾಗು ಸಂಪದ್ಭರಿತ ಸಾಹಿತ್ಯವನ್ನು ಹೊಂದಿರುವ ಭಾಷೆಯಾಗಿದೆ. ಈ ನಾಲ್ಕು ಪ್ರಾಚೀನ ಹಾಗೂ ಸಮೃದ್ಧವಾದ ಸಾಹಿತ್ಯ ಹೊಂದಿರುವ ಭಾಷೆಗಳನ್ನು ಬಿಟ್ಟರೆ ಉಳಿದೆಲ್ಲ ದಕ್ಷಿಣ ದ್ರಾವಿಡ ಭಾಷೆಗಳು ಆಡು ಭಾಷೆಗಳಾಗಿ ಬಳಕೆಯಲ್ಲಿವೆ. ಈ ದಕ್ಷಿಣ ದ್ರಾವಿಡ ಭಾಷೆಗಳನ್ನು ಕೆಲವರು ಗ್ರಾಂಥಿಕ ಭಾಷೆಗಳು ಮತ್ತು ನಿರ್‌ಗ್ರಾಂಥಿಕ ಭಾಷೆಗಳು ಅಥವಾ ಬರಹದ ಭಾಷೆಗಳು ಮತ್ತು ಆಡುಭಾಷೆಗಳು ಎಂದು ಎರಡು ವರ್ಗಗಳಲ್ಲಿ ವರ್ಗೀಕರಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಇವುಗಳಲ್ಲಿ ಕೊಡಗು ಮತ್ತು ತುಳು ಭಾಷೆಗಳು ಎಷ್ಟೇ ಆಡು ಭಾಷೆಗಳಲ್ಲಿ ತೋರಿಬಂದರೂ ಇವು ತುಂಬ ಮುಂದುವರಿದ ಜನರ ಆಡು ಭಾಷೆಯಾಗಿವೆ, ದಕ್ಷಿಣ ದ್ರಾವಿಡ ಭಾಷೆಗಳನ್ನು ಪರಸ್ಪರ ಹೋಲಿಸಿದಾಗ ಇವುಗಳಲ್ಲಿ ಹೆಚ್ಚಿನ ಸಾಮ್ಯ ಇರುವುದು ಕಂಡು ಬರುತ್ತದೆ. ಇವುಗಳಲ್ಲಿ ತೋರಿ ಬರುವ ಆಂತರಿಕ ಸಂಬಂಧವನ್ನು ಆಧರಿಸಿ ಇವುಗಳನ್ನು ಬೇರೆ ಬೇರೆ ವರ್ಗ ಮತ್ತು ಉಪವರ್ಗಗಳಲ್ಲಿ ವರ್ಗೀಕರಿಸಿಕೊಳ್ಳಬಹುದಾಗಿದೆ, ಹೀಗೆ ಅವುಗಳನ್ನು ವರ್ಗೀಕರಿಸಿಕೊಳ್ಳಲು ಹೊರಭಾಗ ಅವುಗಳಲ್ಲಿ ತಮಿಳು, ಮಲೆಯಾಳಂ ಭಾಷಾವರ್ಗ, ಕನ್ನಡ ಭಾಷಾವರ್ಗ, ತುಳು ಭಾಷಾವರ್ಗ, ತೆಲುಗು ಭಾಷಾವರ್ಗ ಎಂಬ ನಾಲ್ಕು ಉಪವರ್ಗಗಳು ದೊರೆಯುತ್ತವೆ.

### ಅ) ತಮಿಳು - ಮಲೆಯಾಳಂ ಭಾಷಾವರ್ಗ

ಇದರಲ್ಲಿ ತಮಿಳು, ಮಲೆಯಾಳಂ, ಕೋತ, ತೊದ, ಇರುಳ, ಕುರುಂಬ ಮುಡುಗ ಮುಂತಾದ ಭಾಷೆಗಳು ಮುಖ್ಯವಾಗಿವೆ. ಇವುಗಳನ್ನು ಪರಸ್ಪರ ಹೋಲಿಸಿ ಪರಿಶೀಲಿಸಿದಾಗ ಇವು ಮೂಲತ: ಒಂದೇ ತಾಯಿ ಭಾಷೆಯಿಂದ ಹುಟ್ಟಿ ಬೆಳೆದು ಬಂದ ಭಾಷೆಗಳಂತೆ ತೋರಿಬರುತ್ತವೆ. ಈ ಎಲ್ಲಾ ಭಾಷೆಗಳು ಹಳೆಯ ತಮಿಳು ಭಾಷೆಯನ್ನು ಹೆಚ್ಚು ಹೋಲುತ್ತವೆ. ಆದ್ದರಿಂದ ಇವು ಮೂಲತ: ಮೂಲ ತಮಿಳು ಅಥವಾ ಹಳೆಯ ತಮಿಳು ಭಾಷೆಯಿಂದಲೇ ಹುಟ್ಟಿ ಬೇರೆ ಬೇರೆಯಾಗಿ ಬೆಳೆದು ಬಂದಿರಬಹುದೆಂದು ಊಹಿಸಲು ಅವಕಾಶಗಳಿವೆ. ಇವುಗಳಲ್ಲಿ ಮೂಲ ತಮಿಳಿನ ಹೆಚ್ಚು ಅಂಶಗಳು ಇರುವುದು ಕಂಡುಬರುತ್ತವೆ. ಈ ಭಾಷೆಗಳಲ್ಲಿ ಯಾವ ಯಾವ ಭಾಷೆಗಳು ಯಾವ ಯಾವ ಕಾಲದಲ್ಲಿ ಮೂಲ ತಮಿಳು ಭಾಷೆಯಿಂದ ಹುಟ್ಟಿ ಬೆಳೆದು ಬಂದಿವೆ. ಎಂಬವುದನ್ನು ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ. ಅದಕ್ಕೆ ಖಚಿತವಾದ ಯಾವ ಆಧಾರವು ದೊರೆಯುವುದಿಲ್ಲ.

## 1) ತಮಿಳು

ದ್ರಾವಿಡ ಭಾಷೆಗಳಲ್ಲೆಲ್ಲಾ ತಮಿಳು ಹೆಚ್ಚು ಪ್ರಾಚೀನ ಭಾಷೆಯಾಗಿದೆ. ಭಾರತದಲ್ಲಿ ಸಂಸ್ಕೃತವನ್ನು ಬಿಟ್ಟರೆ ಎರಡನೆಯ ಪ್ರಾಚೀನ ಭಾಷೆಯಾಗಿ ಕಾಣಿಸಿಕೊಳ್ಳುತ್ತದೆ. ಇದು ಸಾಹಿತ್ಯಿಕ ಹಾಗೂ ಸಾಂಸ್ಕೃತಿಕವಾಗಿ ತುಂಬ ಮುಂದುವರಿದ ಭಾಷೆಯಾಗಿ ಬಳಕೆಯಲ್ಲಿದೆ. ಇಷ್ಟೊಂದು ಪ್ರಾಚೀನತೆಯ ಇತಿಹಾಸವನ್ನು ಹಾಗೂ ಸಂಪದ್ಬರಿತವಾದ ಸಾಹಿತ್ಯಾವನ್ನು ಸಂಪಾದಿಸಿಕೊಂಡಿರುವ ಮತ್ತಾವ ಭಾಷೆ ಕಂಡುಬರುವುದಿಲ್ಲಾ, ತಮಿಳು ತಮಿಳುನಾಡಿ ರಾಜ್ಯಭಾಷೆ ತಮಿಳು ನಾಡಿನಲ್ಲಿ ಮೂರುವರೆ ಕೋಟಿಗೂ ಹೆಚ್ಚು ಜನ ತಮಿಳು ಭಾಷೆಯನ್ನು ಮಾತೃಭಾಷೆಯನ್ನಾಗಿ ಆಡುವವರಿದ್ದಾರೆ. ಭಾರತದ ದೊಡ್ಡದೊಡ್ಡ ಪಟ್ಟಣಗಳಲ್ಲಿ ತಮಿಳು ಭಾಷೆ ಆಡುವವರು ಸಾವಿರಾರು ಜನರಿದ್ದಾರೆ, ಭಾರತದ ಹೊರಗೆ ಶ್ರೀಲಂಕ, ಬರ್ಮ, ಇಂಡೋನೇಷ್ಯ, ಮಲೇಷಿಯ, ವಿಯತ್‌ನಾಮ್, ದಕ್ಷಿಣ ಮತ್ತು ಪೂರ್ವ ಆಫ್ರಿಕ,ಚೀನ, ಜಪಾನ್, ಜರ್ಮನಿ, ಲಕ್ಷದ್ವೀಪ, ಜಾವ, ಜಮೈಕ, ಫಿಜಿ, ಮಡಗಾಸ್ಕರ, ಮಾರಿಷನ್, ಟ್ರೆನಿಡಾಡ್, ಕೌಲಂಪುರ, ಬ್ರಿಟಿಷ್, ಗಿನಿಯ ಮುಂತಾದ ದೇಶ ಮತ್ತು ದ್ವೀಪಗಳಲಿ ತಮಿಳು ಭಾಷೆಯನ್ನು ಆಡುವ ಸಾವಿರಾರು ಜನರಿದ್ದಾರೆ. ಅಮೆರಿಕ, ಇಂಗ್ಲೆಂಡ್, ರಷ್ಯ, ಜರ್ಮನಿ, ಜಪಾನ್, ಮುಂತಾದ ದೇಶಗಳು ಚಿಕಾಗೂ, ಫಿಲಿಡೆಲ್ಫಿಯ ಲಿಂಡನ್, ಪ್ಯಾರಿಸ್, ಹೈಡ್ಲಬರ್ಗ್, ಫ್ರಾನ್ಸ್, ಲೆನಿನ್‌ಗ್ರಾಡ್, ಮಾಸ್ಕ ಮುಂತಾದ ವಿಶ್ವವಿದ್ಯಾನಿಲಯಗಳು ತಮಿಳು ಅಧ್ಯಯನಕ್ಕೆ ಸಾಕಷ್ಟು ಸೌಕರ್ಯ ಕಲ್ಪಿಸಿಕೊಟ್ಟಿದೆ. ಶ್ರೀಲಂಕ, ಮಲೇಷಿಯ, ಕೌಲಾಂಪುರ ಮುಂತಾದವು ತಮಿಳು ಮತ್ತು ಸಾಹಿತ್ಯಾದ ಅಧ್ಯಯನಕ್ಕೆ ವಿಶೇಷ ಅವಕಾಶ ಕಲ್ಪಿಸಿಕೊಟ್ಟವೆ, ಭಾರತದ ಬೇರೆ ಬೇರೆ ವಿಶ್ವವಿದ್ಯಾನಿಲಯಗಳಲ್ಲಿಯೂ ತಮಿಳು ಭಾಷೆ ಮತ್ತು ಸಾಹಿತ್ಯಾದ ಅಧ್ಯಯನಕ್ಕೆ ಅವಕಾಶವಿದೆ ಹೀಗೆ ತಮಿಳು ಬೇರೆ ಬೇರೆ ದೇಶಗಳಲ್ಲಿ ಹೆಚ್ಚು ಜನಪ್ರಿಯತೆಯನ್ನು ಸಂಪಾದಿಸಿಕೊಂಡಿದೆ. ಎನ್ನಬಹುದು ಕ್ರಿ.ಪೂ. ಒಂದನೇಯ ಶತಮಾನದ ತಮಿಳಿನ ಮೊಟ್ಟಮೊದಲ ಶಿಲಾಶಾಸನವೊಂದು ಮಧುರೆಯ ತೆನ್ನವಲ್ಲಿ ಎಂಬ ಸ್ಥಳದಲ್ಲಿ ದೊರತಿದೆ ಇದು ತಮಿಳು ಭಾಷೆಯ ಮೊತ್ತ ಮೊದಲ ಶಿಲಾಶಾಸನವೆಂದು ಕೆಲವರ ಅಭಿಪ್ರಾಯ ತಮಿಳಿನ ಮೊದಲ ಶಿಲಾಶಾಸನದಲ್ಲಿ ತಮಿಳು ಭಾಷೆಯು ಕ್ರಿ.ಪೂ. ಒಂದನೆಯ ಶತಮಾನಕ್ಕಿಂತಲೂ ಹಿಂದೆ ಬಳಕೆಯಲ್ಲಿದ್ದಿತು. ಎಂಬುದು ತಿಳಿದುಬರುತ್ತಿದೆ ತಮಿಳು ನಾಡಿನ ದಕ್ಷಿಣ ಜಿಲ್ಲೆಯ ಗಡಿಗಳಲ್ಲಿ ದೊರೆತಿರುವ ಕೆಲವು ತಮಿಳು ಶಿಲಾಶಾಸನ ಗಳನ್ನು ಗಮನಿಸಿದರೆ ಕ್ರಿ.ಪೂ. ಮುನ್ನೂರು ಅಥವಾ ಇನ್ನೂರು ವರ್ಷಗಳ ಹಿಂದೆ ತಮಿಳು ಭಾಷೆ ಬಳಕೆಯಲ್ಲಿದ್ದಿತು ಎಂಬುದು ತಿಳಿದು ಬರುತ್ತದೆ. ಇದು ತಮಿಳಿನ ಹೆಚ್ಚು ಪ್ರಾಚೀನ ರೂಪ ವಿರಬಹುದೆಂದು ಟಿ.ಸಿ. ಮೀನಾಕ್ಷಿ ಸುಂದರಂ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಕ್ರಿ.ಪೂ. ಮೂರನೇಯ ಶತಮಾನದಿಂದ ಕ್ರಿ.ಪೂ. ಒಂದನೆಯ ಶತಮಾನದವರಿಗೆ ತಮಿಳು, ಬಾಷೆ ಆಡುಭಾಷೆ ಅಥವಾ ವ್ಯವಹಾರಿಕ ಭಾಷೆಯಾಗಿ ಬಳಕೆಯಲ್ಲಿದ್ದಿರಬಹುದೆಂದು ಊಹಿಸಲು ಅವಕಾಶಗಳಿವೆ. ಇದು ಕ್ರಿ.ಪೂ. ಒಂದನೆಯ ಶತಮಾನದಿಂದೀಚೆಗೆ ಬರಹವನ್ನು ಸಂಪಾದಿಸಿ ಕೊಂಡಿರಬಹುದೆಂದು ಕಾಣುತ್ತದೆ. ಕ್ರಿ.ಪೂ. ಒಂದನೇಯ ಶತಮಾನದಿಂದ ಈಚೆಗೆ ತಮಿಳಿನಲ್ಲಿ ಅನೇಕ ಶಿಲಾಶಾಸನಗಳು ದೊರೆಯುತ್ತವೆ. ಕ್ರಿ.ಶ. ದ ಆರಂಭದಲ್ಲಿಯೇ ತಮಿಳು ಭಾಷೆ ಹೆಚ್ಚು ಸಮೃದ್ಧ ಹಾಗೂ ಸಂಪತ್ಬರಿತ ಸಾಹಿತ್ಯ ಸಂಪನ್ನ ಭಾಷೆಯಾಗಿದ್ದಿತು ಎಂದು ಊಹಿಸಲು ಅವಕಾಶವಿದೆ.

ಕ್ರಿ.ಶ. 450 ರಲ್ಲಿ ರಚಿತವಾದ್ದು ಎಂದು ಹೇಳಲಾಗುತ್ತಿರುವ ''ತೊಲ್ಕಾಪಿಯಂ'' ಎಂಬ ವ್ಯಾಕರಣ ಗ್ರಂಥ ತಮಿಳು ಭಾಷೆಯಲ್ಲಿ ಮೊತ್ತ ಮೊದಲ ಸಾಹಿತ್ಯ ಗ್ರಂಥವಾಗಿ ತೋರಿ ಬರುತ್ತದೆ. ಇದಕ್ಕೂ ಹಿಂದೆ ರಚಿತವಾದ ಯಾವ ಸಾಹಿತ್ಯ ಗ್ರಂಥವೂ ತಮಿಳು ಭಾಷೆಯಲ್ಲಿ ದೊರೆಯುವುದಿಲ್ಲ, ತಮಿಳು ಭಾಷೆಯ ಹೆಚ್ಚು ಪ್ರಾಚೀನವಾದ ಈ ಸಾಹಿತ್ಯ ಗ್ರಂಥದ ಕಾಲದ ಬಗ್ಗೆ ವಿದ್ವಾಂಸರಲ್ಲಿ ಒಮ್ಮತವಿಲ್ಲ. ಇದರ ಕಾಲ ಸಂಘ. ಸಾಹಿತ್ಯಕ್ಕಿಂತಲೂ ಸುಮಾರು ಕ್ರಿ.ಶ. 200 ಅಥವಾ 300 ವರ್ಷಗಳಷ್ಟು ಹಿಂದಿನದಿರಬಹುದೆಂದು ಕೆಲವರು ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ. ಈ ವ್ಯಾಕರಣ ಗ್ರಂಥದ ಜೊತೆಗೆ ಬುದ್ಧ ಮಿತ್ರ ರಚಿತ ವೀರ ಸೂಳಯಂ, ಭವನಂದಿ ಮುನಿರಚಿತ ನನ್ನೊಲ್ ಮುಂತಾದ ವ್ಯಾಕರಣ ಗ್ರಂಥಗಳು ದೊರೆಯುತ್ತವೆ. ಇವು ತೊಲ್ಕಾಪಿಯಂ ನಷ್ಟು ಪ್ರಾಚೀದೇನಲ್ಲ. ಇದರಲ್ಲಿ ತಮಿಳು ಭಾಷೆಯ ಪ್ರಾಚೀನ ರೂಪವು ದೊರೆಯುತ್ತದೆ. ಇದರಲ್ಲಿ ಹಳೆಯ ತಮಿಳು ಭಾಷೆಯನ್ನು ಕುರಿತ ವಿವರಿಸಿಕೊಳ್ಳಲಾಗಿದೆ. ಈ ತೊಲ್ಕಾಪಿಯಂನ ಕೆಲವು ವ್ಯಾಕರಣ ವಿಚಾರಗಳು ಆಫ್ರಿಕಾದ ಸ್ವಯಿಲಿ ಹಾಗೂ ಉಲ್ಫ್ ಭಾಷೆಗಳಲ್ಲಿ ಕಂಡು ಬರುತ್ತದೆ ಎಂದು ಕೆಲವರ ಅಭಿಪ್ರಾಯ. ತಮಿಳು ಭಾಷೆಯ ಚರಿತ್ರೆಯ ಆರಂಭ ಎಷ್ಟೇ ಅನಿಶ್ಚಿತವಾಗಿ ತೋರಿ ಬಂದರೂ ತಮಿಳು ಅತ್ಯಂತ ಪ್ರಾಚೀನ ಭಾಷೆ ಎನ್ನುವುದರಲ್ಲಿ ಅನುಮಾನವೇನಿಲ್ಲ.ತಮಿಳು ಭಾಷೆಯಲ್ಲಿ ಮೂಲ ದ್ರಾವಿಡ ಭಾಷೆಯ ಹಲವಾರು ಅಂಶಗಳು ಉಳಿದುಕೊಂಡು ಬಂದಿದೆ. ಇದಕ್ಕೆ ಕೆಲವು ಉದಾಹರಣೆಗಳು ದೊರೆಯುತ್ತದೆ. ಈ ಕಾರಣದಿಂದಲೇ ಕೆಲವರು ಇದು ಮೂಲ ದ್ರಾವಿಡ ಭಾಷೆಗೆ ತುಂಬ ಹತ್ತಿರವಾಗಿದ್ದ ಭಾಷೆ ಇರಬಹುದೆಂದು ಊಹಿಸಿದ್ದಾರೆ. ತಮಿಳು ಭಾಷೆಗಿಂತಲೂ ಕನ್ನಡ ಭಾಷೆಯಲ್ಲಿ ಮೂಲ ದ್ರಾವಿಡ ಅಂಶಗಳು ಹೆಚ್ಚಾಗಿ ಕಂಡುಬರುತ್ತವೆ ಎಂದು ಕೆಲವರ ಅಭಿಪ್ರಾಯ. ಕನ್ನಡ ಭಾಷೆಯಲ್ಲಿ ತಮಿಳು ಭಾಷೆಗಿಂತಲೂ ಹೆಚ್ಚಾಗಿ ಸಂಸ್ಕೃತಿ ಮತ್ತು ಪ್ರಾಕೃತಿ ಭಾಷೆಗಳು ಪ್ರಭಾವ ಕಂಡುಬರುತ್ತದೆ. ಆದರೆ ತಮಿಳು ಭಾಷೆಯಲ್ಲಿ ಇವುಗಳ ಪ್ರಭಾವ ಬಹಳ ಕಡಿಮೆ. ತೆಲುಗು ಮತ್ತು ಮಲೆಯಾಳಂ ಭಾಷೆಗಳಲ್ಲಿ ಕನ್ನಡಕ್ಕಿಂತಲೂ ಹೆಚ್ಚು ಸಂಸ್ಕೃತ ಶಬ್ದಗಳಿರುವುದು ಕಂಡುಬರುತ್ತದೆ.

ಪ್ರಾಚೀನ ಸಂಸ್ಕೃತ ಪಂಡಿತರು ತಮಿಳು ಭಾಷೆಯನ್ನು ದ್ರಾವಿಡ ಎಂದು ಕರೆದುಕೊಂಡಿದ್ದಾರೆ. ಪ್ರಾಚೀನ ಸಂಸ್ಕೃತ ಮತ್ತು ಪ್ರಾಕೃತ ಗ್ರಂಥಗಳಲ್ಲಿ ತಮಿಳು ಎಂಬ ಶಬ್ದಕ್ಕೆ ಸಂವಾದಿಯಾಗಿ ದಮಿಳ್, ದಮಿಡ, ದ್ರವಿಡ, ದ್ರಾವಿಡ ಮುಂತಾದ ಶಬ್ದಗಳು ಬಳಕೆಯಲ್ಲಿವೆ. ಇದೇ ರೀತಿ ತಮಿಳು ಎಂಬುದಕ್ಕೆ ದಮಿಳು, ತಮಿಳು, ದ್ರಾವಿಡ ಎಂಬ ಶಬ್ದಗಳು ಸಮನಾರ್ಥಕ ಶಬ್ದಗಳಾಗಿ ಬಳಕೆಯಾಗಿರುವ ಉದಾಹರಣೆಗಳು ಕೆಲವು ಪ್ರಾಚೀನ ಗ್ರಂಥಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ದೊರೆಯುತ್ತವೆ. ಕಾಲ್ಡ್‌ವಲ್ ಮುಂತಾದ ವಿದ್ವಾಂಸರು ಹಳೆಯ ತಮಿಳು ಭಾಷೆಯಲ್ಲಿ ಶಿಂದೆಮಿಳ್ ಮತ್ತು ಕಲಾಂದೆಮಿಳ್ ಎಂಬ ಎರಡು ರೂಪಗಳು ಇದ್ದುವೆಂದು ಗುರುತಿಸಿಕೊಂಡಿದ್ದಾರೆ. ಇವುಗಳಲ್ಲಿ ಶಿಂದೆಮಿಳ್ ಸಾಹಿತ್ಯಾತ್ಮಕ ತಮಿಳು ಭಾಷೆ ರೂಪಕ್ಕೂ ಕಲಾಂದೆಮಿಳ್ ವ್ಯವಹಾರಿಕ ತಮಿಳು ಭಾಷೆ ರೂಪಕಕ್ಕೂ ತಲಾ ಸಂಬಂಧಿಸಿದವುಗಳಾಗಿದೆ. ಎಂದು ಅವರು ಅಭಿಪ್ರಾಯ ವ್ಯಕ್ತಪಡಿಸುತ್ತಾ ಈ ಎರಡು ತಮಿಳು ರೂಪಗಳಲ್ಲಿ ಸಾಕಷ್ಟು ವ್ಯತ್ಯಾಸ ಕಾಣಿಸಿ ಕೊಳ್ಳುತ್ತದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ತಮಿಳು ಬಹು ವಿಶಾಲವಾದ ಕ್ಷೇತ್ರದಲ್ಲಿ ಬಳಕೆಯಲ್ಲಿರುವುದರಿಂದ ಅದರಲ್ಲಿ ಅನೇಕ ಪ್ರಾದೇಶಿಕ ಮತ್ತು ಸಾಮಾಜಿಕ ತಮಿಳು ರೂಪಗಳು ಗೋಚರಿಸುತ್ತದೆ. ತಮಿಳು ನಾಡಿನಾದ್ಯಂತ ಉತ್ತರ ಭಾಗದ ತಮಿಳು, ಪೂರ್ವ ಭಾಗದ ತಮಿಳು, ಪಶ್ಚಿಮ ಭಾಗದ ತಮಿಳು, ದಕ್ಷಿಣ ಭಾಗದ ತಮಿಳು ಎಂಬ ರೂಪಗಳು ಮದರಾಸು ತಮಿಳು, ಜಾಫ್ನ ತಮಿಳು, ಬ್ರಾಹ್ಮಣ ಮತ್ತು ಬ್ರಾಹ್ಮಣೇತರರ ತಮಿಳು ಮುಂತಾದ ಪ್ರಭೇಧಗಳನ್ನು ಗುರುತಿಸಿಕೊಳ್ಳಬಹುದು. ಇಷ್ಟೊಂದು ವಿಶಾಲವಾದ ಕ್ಷೇತ್ರದಲ್ಲಿ ವ್ಯಾಪಿಸಿ ಕೊಂಡಿರುವ ತಮಿಳು ಭಾಷೆಯಲ್ಲಿ ಬೇರೆ ಬೇರೆ ಪ್ರಾದೇಶಿಕ ಹಾಗೂ ಸಮಾಜಿಕ ರೂಪಗಳು ಕಾಣಿಸಿಕೊಳ್ಳುವುದು ಸರ್ವೇ ಸಾಮಾನ್ಯ. ಈಗಿನ ಗ್ರಂಥದಲ್ಲಿ ಹಾಗೂ ವ್ಯವಹಾರಿಕ ತಮಿಳಿನಲ್ಲಿಯೂ ಸಾಕಷ್ಟು ವ್ಯತ್ಯಾಸಗಳು ಕಾಣಿಸಿಕೊಳ್ಳುತ್ತವೆ.

ಯರವ, ಯರಕುಲ, ಕೈಕಡಿ, ಪರವ, ಮಲೈಕುಡಿ, ಪಣಿಯ, ಬುರಗುಂಡಿ ಮುಂತಾದ ರೂಪಗಳು ತಮಿಳಿನ ಉಪ ಭಾಷೆಗಳಿರಬಹುದೆಂದು ಕೆಲವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ತಮಿಳು ತುಂಬ ಮಧುರವಾದ ಭಾಷೆ ಹಾಗೂ ಹೆಚ್ಚು ಸಮೃದ್ಧವಾದ ಭಾಷೆಯಾಗಿದೆ. ಇದನ್ನು ಅಗಸ್ತ್ಯ ಮಹಾಮುನಿಯು ರೂಪಿಸಿ ಇದನ್ನು ತಮಿಳುರಿಗೆ ಕಲಿಸಿದನೆಂದು ಕೆಲವರು ಹೆಮ್ಮೆ ಪಡುತ್ತಿದ್ದಾರೆ.

**2) ತೊದ ಭಾಷೆ**

ಕ್ರಿ.ಶ.1827 ರಲ್ಲಿ ಬಿ.ಸ್ಮಿತ್ ಎಂಬ ವಿದ್ವಾಂಸರು ಮೊಟ್ಟಮೊದಲಿಗೆ ತೊದ ಭಾಷೆಯನ್ನು ಗುರುತಿಸಿದರು. ನೀಲಗಿರಿಯ ಬೆಟ್ಟಗಳಲ್ಲಿ ವಾಸಿಸುವ ಆದಿವಾಸಿಗಳು ತೋದ ಕೋತ ಹಾಗೂ ಕನ್ನಡದ ಉಪ ಭಾಷೆಯಾದ ಬಡಗ ಭಾಷೆಯನ್ನಾಡುತ್ತಾರೆ. ಎಂ.ಬಿ. ಎಮಿನೋ ಹಾಗೂ ಎಸ್.ಶಕ್ತಿವೇಲ್ ಅವರು ತೊದವ ಜನಾಂಗ ಹಾಗೂ ಭಾಷೆಯ ಅಧ್ಯಯನ ಕ್ಷೇತ್ರಕ್ಕೆ ಸಲ್ಲಿಸಿದ ಕಾಣಿಕೆ ಗಮನಾರ್ಹವಾಗಿದೆ.ತೊದ ಜನಾಂಗದವರನ್ನು ತೋಡರು ಎನ್ನುವರು. ನೀಲಗಿರಿ ಬೆಟ್ಟಗಳಲ್ಲಿ ಇರುವ ಆದಿವಾಸಿಗಳ ಗುಂಪಿಗೆ ಸೇರಿದ ಈ ತೋಡರು ವಾಸಮಾಡುವ ಜಾಗ ವಿಚಿತ್ರ ರೀತಿಯದ ಬೆಟ್ಟಗುಡ್ಡಗಳ ಕಣಿವೆಗಳಲ್ಲಿ ನೀರು ಮತ್ತು ಹಲ್ಲು ಇದ್ದು ತಂಪಾಗಿರುವ ತಾಣಗಳಲ್ಲಿ ಇವರು ಚಕ್ರಕಾರಗಳಲ್ಲಿ ಕಲ್ಲಿನ ಗೋಡೆಗಳನ್ನು ಎಬ್ಬಿಸುವರು ಮತ್ತು ಕಲ್ಲಿನ ಗೋಡೆಯ ಮೇಲೆ ಶಂಖುವಿನ ಆಕಾರದ ಗುಡಿಸಲನ್ನು ಕಟ್ಟುವರು ಈ ತೆರನಾಗಿ ಕಟ್ಟದ ಹತ್ತು ಹನ್ನೆರಡು ಗುಡಿಸಲುಗಳ ಗುಂಪಿಗೆ ಮಾಡ (ಮಹಡಿ) ಎಂದು ಕರೆಯುವರು ಮಾಡ ಎಂದರೆ ಗ್ರಾಮ ಎಂಬ ಅರ್ಥದಲ್ಲೂ ಅವರು ಆ ಪದವನ್ನು ಬಳಸುವರು. ತೋಡರಿಗೆ ಆಕಳ ಬಲವೇ ಬಲ ದನಗಳಿಗೆ ತೋಡರು ಹೆಚ್ಚು ಪ್ರಾಶಸ್ತ್ಯವಿತ್ತಿದ್ದಾರೆ. ಅವರ ಎಲ್ಲಾ ವ್ಯವಹಾರ ಹಾಗೂ ಒಟ್ಟು ಜೀವನ ನಿರ್ವಹಣೆ ಆಕಳ ಸಂಪತ್ತಿನ ಸುತ್ತ ಹಬ್ಬಿದೆ. ತೋಡರು ದನದ ದೊಡ್ಡಿಗೆ ಹೈನಿನ ಮನೆ - ಹೈನು - ಗುಡಿಸಲು ಎಂದು ಹೇಳುವರು ಈ ಹೈನು ಮನೆಯೇ ಅವರ ದೇವಾಲಯ ಹಾಲು ಮೊಸರು ಮಜ್ಜಿಗೆ ಮಾಡುವರು ಹುಟ್ಟಿನಿಂದ ಹಿಡಿದು ಚಟ್ಟದವರೆಗೆ ತೋಡರ ಪ್ರತಿಯೊಂದು ಕೆಲಸದಲ್ಲೂ ಈ ಹೈನಿನ ಸಂಬಂಧ ಇದ್ದೇ ಇರುತ್ತದೆ. ಎಮ್ಮೆಯನ್ನು ಐರ್ ಎಂದೂ ಕೋಣವನ್ನು ಏರ್ ಎಂದೂ ಹೇಳುವರಲ್ಲದೆ ಎಲ್ಲ ಎಮ್ಮೆಗಳಿಗೂ ಬೇರೆ ಬೇರೆ ಹೆಸರು ಕೊಟ್ಟಿರುತ್ತಾರೆ ಎಮ್ಮೆ ಕರು ಹಾಕಿದರೆ

ಅದನ್ನು ಹಬ್ಬದಂತೆ ಆಚರಿಸುತ್ತಾರೆ ತೋಡರು ಬಡಗರೊಡನೆ ಮಾತನಾಡುವಾಗ ಮಾತ್ರ ಬಹುಮಟ್ಟಿಗೆ ತಮಿಳು ಭಾಷೆಯನ್ನು ಹೋಲುವ ಉಪಭಾಷೆಯಲ್ಲೇ ಸಂಭಾಷಿಸುವರು ಹೀಗಾಗಿ ತೋಡರ ಭಾಷೆ ದ್ರಾವಿಡ ಜಾತಿಗೆ ಸೇರಿದ ವಿಶಿಷ್ಟವಾದ ಒಂದು ಮಿಶ್ರಭಾಷೆಯಾಗಿದೆ.

ಈ ಭಾಷೆಯಲ್ಲಿ ತೆಲಗು ಭಾಷೆಯ ಪ್ರಭಾವ ಕಡಿಮೆ. ತಮಿಳು ರೂಪಗಳು ಇವೆ ಮಲಯಾಳಂ ಭಾಷೆಯ ಸಂಬಧ ಅಷ್ಟಾಗಿ ಕಾಣುವುದಿಲ್ಲ. ಡಾ.ಪೋಪ್ ಈ ಭಾಷೆ ಕನ್ನಡ ಭಾಷೆಗೆ ಸಮೀಪತರವಾಗಿದೆಯೆಂದೂ ಬಹುಶಃ ತೊದ ಭಾಷೆ ಕನ್ನಡ ಭಾಷೆಯ ಉಪಭಾಷೆಯೇ ಇರಬೇಕೆಂದೂ ಭಾವಿಸಿದ್ದರು.

3) ಕೋತ ಭಾಷೆ

ದ್ರಾವಿಡ ಭಾಷೆಗಳಲ್ಲಿ ಒಂದಾದ ಕೋತ ಭಾಷೆಯನ್ನು ಕುರಿತು ಪ್ರಾಧ್ಯಾಪಕ ಮಕ್ರಿಜಾರ್ನಸನ್ ಎಮಿನೂ ಅವರು ಬಹಳ ಒಳ್ಳೆಯ ಹೊತ್ತಗೆಗಳನ್ನು ಹೊರತಂದಿದ್ದಾರೆ. ಕೋತ ಭಾಷೆಯ ಧ್ವನಿಸ್ವರೂಪದ ವಿವರಣೆ ಇಂದ ಮೊದಲುಗೊಂಡು ಅವರ ವ್ಯಾಕರಚನೆ, ವ್ಯಾಕರಣ ಸ್ವರೂಪದವರೆಗೂ ಸಾಕಷ್ಟು ಸಾಮಾಗಿ ಒದಗಿಸಿದ್ದಾರೆ.

ಕೋತ ಭಾಷೆಯನ್ನು ಆಡುವವರು ಉಳುಮೆಯ ಜೀತಗಾರರು, ಅವರು ನೀಲಗಿರಿ ಬೆಟ್ಟದಲ್ಲಿ ಹಿಂದಿನಿಂದಲೂ ಬೀಡು ಬಿಟ್ಟಿದ್ದಾರೆ. ಕಾಲ್ಡೆವೆಲ್ ಕೋತ ಭಾಷೆಯನ್ನು ಕನ್ನಡ ಭಾಷೆಗೆ ಹತ್ತಿರದ ಭಾಷೆ ಯೆಂದಿದ್ದಾರೆ. ನೀಲಗಿರಿ ಬೆಟ್ಟ ಇರುಳುರು, ಬಡಗರು, ತೊದವರು, ಕುರುಬರು ಮತ್ತು ಯರವರು, ಯರಕುಲರು ಕೊರವರು, ಕೋತರು ಹೀಗೆ ಹಲವಾರು ವರ್ಗದವರು ಭಾಷೆಗಳು ತವರು ಇದರ ಪರಿಣಾಮವಾಗಿ ಈ ಭಾಷೆಗಳಲ್ಲಿಯೇ ಪರಸ್ಪರ ಪ್ರಭಾವ ಸಾಧ್ಯವಿದೆ.

4) ಇರುಳ ಭಾಷೆ

ಕರ್ನಾಟಕ ಗಡಿಯ ಭಾಗಕ್ಕೆ ಹೊಂದಿಕೊಂಡಿರುವ ನೀಲಗಿರಿಯು ಕೋತ, ಬಡಗ, ತೊದಭಾಷೆಗಳಿಗೆ ದ್ವೀಪದಂತೆ ಇದೆಯೆಂದು ಹೇಳಿದ್ದಾಗಿದೆ. ಕನ್ನಡ, ತಮಿಳು, ಭಾಷೆಗಳು ಇಲ್ಲಿ ಪ್ರಚಲಿತವಾಗಿದವೆ. ಅದರಂತೆ ಈ ಬೆಟ್ಟದ ಪ್ರದೇಶದಲ್ಲಿ ವಾಸಿಸುವ ಇರುಳೆರಂಬ ಜನಾಂಗದವರು ವ್ಯಾಹರಿಸುವ ಭಾಷೆಯಾದ ಇರುಳ ಭಾಷೆಯನ್ನು ಉಪಭಾಷೆಯಾಗಿ ಪರಿಗಣಿಸದೆ ಒಂದು ಸ್ವತಂತ್ರ ಭಾಷೆಯಾಗಿ ಪರಿಶೀಲಿಸಬೇಕೆಂಬ ಸೂಚನೆಯಿಂದ ಇರುಳ ಭಾಷೆಯನ್ನು ತಮಿಳು-ಮಲೆಯಾಳಂ ಉಪಶಾಖೆಗೆ ಅಳವಡಿಸಲಾಗಿದೆ.

ಕಮಿಲ್‌ಜೈಲ್‌ಬಿಲ್ ಅವರ The Iruda Language (1973) ಎಂಬ ಪುಸ್ತಕದಿಂದ ಇರುಳ ಎಂಬುದು ಒಂದು ಸ್ವತಂತ್ರ ದ್ರಾವಿಡ ಭಾಷೆಯೆಂಬುದು ಸ್ಪಷ್ಟವಾಗಿರುತ್ತದೆ. ನೀಲಗಿರಿ ಅರಣ್ಯನಿಬಿಡ ಕಣಿವೆಗಳಲ್ಲಿನ ಇರುಳರ ಭಾಷೆ ಪ್ರದೇಶಕ್ಕೆ ಒಂದು ಕಡೆ ತೊದ, ಕೋತ, ಬಡಗಿ ಭಾಷೆಗಳಿದರೂ, ಇನ್ನೊಂದು ಕಡೆ ಕನ್ನಡ, ತಮಿಳು, ಮಲೆಯಾಳಂ

ಭಾಷೆಗಳಿವರೂ ಹತ್ತಿರವಾಗಿದ್ದಾರೆ. ನೀಲಗಿರಿ ಪ್ರದೇಶಕ್ಕೆ ಇರುಳರು ಬರುವ ಮೊದಲೇ ತೊದವರೂ, ಕೋತರೂ ಬಂದಿರಬಹುದು ಇರುಳು ಭಾಷೆ ಪೂರ್ವ ತಮಿಳುಭಾಷೆಯಿಂದ ತೊದದ ಭಾಷೆಯಾದ ಮೇಲೆ ಬೇರೆಯಾಗಿರಬಹುದು.

5. ಮುಡುಗ

ಕೇರಳದ ಪಾಲ್‌ಘಾಟ್ ಜಿಲ್ಲೆಯ ಬೆಟ್ಟಗುಡ್ಡ ಪ್ರದೇಶದಲ್ಲಿ ಸುಮಾರು ಎರಡು ಸಾವಿರಕ್ಕೂ ಹೆಚ್ಚು ಜನರು ಮುಡುಗ ಭಾಷೆ ಆಡುವವರಿದ್ದಾರೆ. ಆದಿವಾಸಿ ಜನಾಂಗಕ್ಕೆ ಸೇರಿದ ತುಂಬ ಹಿಂದುಳಿದ ಬುಡಕಟ್ಟು ಜನಾಂಗದವರಾದ ಇವರನ್ನು ಮುಡುಗರು ಎನ್ನುತ್ತಾರೆ. ಈ ಭಾಷೆ ತಮಿಳು ಭಾಷೆಯನ್ನು ಹೆಚ್ಚು ಹೋಲುತ್ತದೆ. ಅದ್ದರಿಂದ ಇದು ಹಳೆಯ ತಮಿಳು ಭಾಷೆಯಿಂದ ಹುಟ್ಟಿ ಬೆಳೆದುಬಂದಿರಬಹುದೆಂದು ಊಹಿಸಲು ಅವಕಾಶಗಳಿವೆ. ಕೆಲವರು ಇದು ತಮಿಳು ಭಾಷೆಯ ಉಪಭಾಷೆ ಇರಬಹುದೆಂದು ವಾದಿಸಿದರೆ ಮತ್ತೆ ಕೆಲವರು ಇದು ತಮಿಳು ಮತ್ತು ಮಲೆಯಾಳಂ ಭಾಷೆಗಳ ಮಿಶ್ರಣವಿದ್ದರೂ ಇರಬಹುದೆಂದು ವಾದಿಸಿದ್ದಾರೆ. ಈಗ ಇದು ಒಂದು ಸ್ವತಂತ್ರ ಹಾಗೂ ಪ್ರತ್ಯೇಕವಾದ ದ್ರಾವಿಡ ಭಾಷೆ ಎನ್ನುವುದರಲ್ಲಿ ಅನುಮಾನವಿಲ್ಲ. ಎಸ್. ರಾಮಚಂದ್ರನ್ ಎಂಬಾತ ತುಳು, ತಮಿಳು, ಮಲೆಯಾಳಂ ಭಾಷೆಗಳ ಪ್ರಭಾವ ಮುಡುಗ ಭಾಷೆಯಲ್ಲಿದೆ ಎಂದಿದ್ದಾನೆ. ಮುಡುಗ ಭಾಷೆ ತಮಿಳಿಗೆ ಸಮೀಪವಾದರೂ ಭಿನ್ನವಾಗಿ ನಿಲ್ಲುತ್ತದೆ.

ಕಾಮಿಲ್ ಜ್ವೆಲೆಬಿಲ್ ನೀಲಗಿರಿ ಬೆಟ್ಟದ ಸುತ್ತಮುತ್ತಲ ಪ್ರದೇಶದಲ್ಲಿ ಕಂಡುಬರುವ ಕುರುಂಬ ಭಾಷೆಯನ್ನು ವಿ.ಚಿದಂಬರಂ ಪಿಳ್ಳೆ ಎಂಬಾತನು ನೀಲಗಿರಿ ಬೆಟ್ಟದ ಕಸಬ ಭಾಷೆಯನ್ನು ರ‍್ಹುಡ್, ಧುಂ ಧ್ವಿಲ್ ಎಂಬಾತನು ಕಾಡಭಾಷೆಯನ್ನು ಸ್ವತಂತ್ರ್ಯ ಹಾಗೂ ಸ್ವತಂತ್ರ್ಯವಾದ ದ್ರಾವಿಡ ಭಾಷೆಗಳೆಂದು ಪರಿಗಣಿಸಿಕೊಂಡಿದ್ದಾರೆ. ಈ ದಿಸೆಯಲ್ಲಿ ಇನ್ನು ಆಳವಾದ ಸಂಶೋಧನಾ ಕಾರ್ಯ ನಡೆಯಬೇಕಾಗಿದೆ.

6. ಮಲೆಯಾಳಂ

ಇದು ಕೇರಳ ರಾಜ್ಯದ ರಾಜ್ಯ ಭಾಷೆ ಮತ್ತು ಆಡಳಿತ ಭಾಷೆಯಾಗಿದೆ ಮಲೆಯಾಳಂ ಭಾಷೆಯನ್ನು ಕೇರಳ ರಾಜ್ಯದಲ್ಲಿ ಸುಮಾರು ಎರಡೂವರೆ ಕೋಟಿಗೂ ಹೆಚ್ಚು ಜನರು ಮಾತೃಭಾಷೆಯನ್ನಾಗಿ ಆಡುವವರಿದ್ದಾರೆ. ದಕ್ಷಿಣ ಭಾರತದ ಪಶ್ಚಿಮದ ಕರಾವಳಿ ತೀರಪ್ರದೇಶದಲ್ಲಿ ವಾಸಿಸುವ ಇವರು ಜಗತ್ತಿನ ಬೇರೆ ಬೇರೆ ಕಡೆಗಳಿಗೆ ವಲಸೆಹೋಗಿದ್ದಾರೆ. ಭಾರತದ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಸಾವಿರಾರು ಜನರು ಮಲೆಯಾಳಂ ಭಾಷೆ ಆಡುವವರಿದ್ದಾರೆ. ಮಲೆಯಾಳಂ ಭಾಷೆ ತಮಿಳು ಭಾಷೆಯನ್ನು ಹೆಚ್ಚು ಹೋಲುವುದು ಈ ಕಾರಣದಿಂದಲೇ ಇದು ತಮಿಳುಭಾಷೆಯ ಉಪಭಾಷೆ ಇರಬಹುದೆಂದು ಕೆಲವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಕಾಲ್ಡ್‌ವೆಲ್ ಮಹಾಶಯನು ಮಲೆಯಾಳಂ ಭಾಷೆಯ ತಮಿಳು ಭಾಷೆಗೆ ತುಂಬ ಹತ್ತಿರವಾದ ಭಾಷೆಯಾಗಿ ತೋರಿ ಬರುತ್ತದೆಯಾದರೂ ಇದು ಹಳೆಯ ತಮಿಳು ಭಾಷೆಯಿಂದ ಕ್ರಿ.ಶ. ಒಂಬತ್ತು ಅಥವಾ ಹತ್ತನೆಯ ಶತಮಾನಕ್ಕೂ ಹಿಂದೆ ಹುಟ್ಟಿ ಬೇರೆ ಬೇರೆಯಾಗಿ ಬೆಳೆದು ಬಂದಿರಬಹುದೆಂದು ಅಭಿಪ್ರಾಯ ವ್ಯಕ್ತ ಪಡಿಸಿದ್ದಾನೆ. ಮಲೆಯಾಳಂ ಭಾಷೆಯಲ್ಲಿ ಸಂಸ್ಕೃತದ ಪ್ರಭಾವವು ಹೆಚ್ಚಾಗಿ ಕಂಡು ಬರುತ್ತದೆ.

ಕ್ರಿ.ಶ. ಏಳನೆಯ ಶತಮಾನದ ದಿಂದಲೇ ಪ್ರಾಚೀನ ಮಲೆಯಾಳಂ ಸಾಹಿತ್ಯವು ದೊರೆಯುವುದೆಂದು ಪಿ.ಗೋವಿಂದ ಪಿಳ್ಳ ಅಭಿಪ್ರಾಯ ವ್ಯಕ್ತಪಡಿಸುತ್ತಾ ಇದಕ್ಕೆ ಸಾಕಷ್ಟು ಉದಹರಣೆಯನ್ನು ತೋರಿಸಿಕೊಟ್ಟಿದ್ದಾನೆ. ಕ್ರಿ.ಶ. 930 ಹತ್ತನೆಯ ಶತಮಾನದ ಸ್ಥಾಣುರವಿಯ ಕೊಟ್ಟಾಯಂ ತಾಮ್ರ ಶಾಸನವು ಮಲೆಯಾಳಂ ಭಾಷೆಯಲ್ಲಿ ದೊರೆಯುತ್ತದೆ. ಇದು ಮಲೆಯಾಳಂ ಭಾಷೆಯಲ್ಲಿ ದೊರೆಯುವ ಮೊಟ್ಟ ಮೊದಲ ಶಾಸನವೆಂದು ಕೆಲವರು ಅಭಿಪ್ರಾಯ ಇದಕ್ಕೂ ಹಿಂದೆ ಇದ್ದಿರಬಹುದಾದ ಯಾವ ಶಾಸನವೂ ಮಲೆಯಾಳಂ ಭಾಷೆಯಲ್ಲಿ ದೊರೆಯುವುದಿಲ್ಲಾ ಮತ್ತೆ ಕೆಲವರು ಕ್ರಿ.ಶ. 9ನೇ ಶತಮಾನದ ಮಲೆಯಾಳಂ ಭಾಷೆಯ ಅತಿ ಪ್ರಾಚೀನ ಶಿಲಾ ಶಾಸನವೊಂದು ದೊರಕಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇದಕ್ಕೆ ಖಚಿತವಾದ ಯಾವ ಆಧಾರಗಳೂ ದೊರೆಯುವುದಿಲ್ಲ. ಹತ್ತನೇ ಶತಮಾನಕ್ಕೂ ಹಿಂದೆ ಆರಂಭವಾದ ಮಲೆಯಾಳಂ ಭಾಷೆ ಹಲವಾರು ಹಂತಗಳಲ್ಲಿ ಬೆಳೆದುಬಂದಿದೆ. ತಮಿಳು ಮತ್ತು ಮಲೆಯಾಳಂ ಭಾಷೆಗಳು ಎಷ್ಟೇ ಸಮೀಪವರ್ತಿ ಭಾಷೆಗಳಾಗಿತೋರಿ ಬಂದರೂ ಅವುಗಳಲ್ಲಿ ಸಾಕಷ್ಟು ವ್ಯತ್ಯಾಸವಿದೆ.

ಹದಿನೆಂಟನೆಯ ಶತಮಾನಕ್ಕಿಂತ ಹಿಂದೆ ಮಲೆನಾಟು, ಮಲೆನಾಟ್ಟು, ಮಲೆಯಾಳಿ ಎಂಬ ಶಬ್ದಗಳು ಬಳಕೆಯಾಗಿರುವುದು ಕಂಡು ಬರುತ್ತವೆ ಮಲೆಯಾಳಿ, ಮಲೆಯಾಳರ್ ಎಂಬ ಶಬ್ದಗಳು ಮಾತ್ರ ಆ ಜನರಿಗೆ ಮಾತ್ರ ಅನ್ವಯವಾಗುತ್ತವೆ. ಹದಿವರಾನೆಯ ಶತಮಾನದ ಕನ್ನಡ ಕವಿ ಹರಿಹರನು ಮಲೆಯಾಳ ಎಂಬ ಶಬ್ದವನ್ನು ಸ್ವತಂತ್ರ ದೇಶಗಳ ಪಟ್ಟಿಯಲ್ಲಿ ಸೇರಿಸಿದ್ದಾನೆ. ಮಲೆಯಾಳ ಎಂಬ ಶಬ್ಧವು ಮಾಟ್ಟ ಮೊದಲಿಗೆ ಉಲ್ಲೇಖವಾಗಿರುವುದು ಕನ್ನಡದಲ್ಲಿ ಮಾತ್ರ ಎಂದು ಕೆಲವರ ಊಹೆ. ಮಲೆಯಾಳಂ ಎಂಬ ಸಂಸ್ಕೃತದ ರೂಪ ಬಳಕೆಗೆ ಬಂದಿದ್ದು ಇತ್ತೀಚೆಗೆ ಮಾತ್ರ ಮಲೆಯಾಳಂ ಎಂಬ ಶಬ್ದದಲ್ಲಿ ಮಲೆ ಎಂಬುದು ಪೂರ್ಣವಾಗಿ ಸಂಸ್ಕೃತ ಮಲೆಗಳಿಂದ ಆವೃತ್ತವಾದ ಸ್ಥಳವೇ ಮಲೆನಾಡು ಎನ್ನುವಂತೆ ಮಲೆಗಳಿಂದ ಕೂಡಿರುವ ಸ್ಥಳವೆ ಮಲೆಯಾಳ ಆಗಿದೆ ಇದನ್ನು ಕೆಲವರು ಮಂಬಾರ್ ಎಂತಲೂ ಕರೆಯುವರು ಕ್ರಿ.ಶ.ದ ಆರಂಭದ ಕಾಲದಲ್ಲಿ ಇಲ್ಲವೇ ಕ್ರಿ.ಶ. ಎರಡು ಮತ್ತು ಮೂರನೇಯ ಶತಮಾನಗಳ ನಡುವೆ ತಮಿಳು ಭಾಷೆಯಿಂದ ಮಲೆಯಾಳಂ ಭಾಷೆ ಹುಟ್ಟಿಬೆಳೆದು ಬಂದಿರಬಹುದೆಂದು ಕೆಲವರು ಊಹಿಸಿದ್ದಾರೆ. ಕ್ರಿ.ಶ. ಹತ್ತನೆಯ ಶತಮಾನದಿಂದ ಮಲೆಯಾಳಂ ಭಾಷೆಯ ಚರಿತ್ರೆಯು ಆರಂಭವಾಗುವುದು ಇದಕ್ಕೂ ಹಿಂದೆ ಇದು ಕೇವಲ ಆಡುಭಾಷೆಯಾಗಿ ಬಳಕೆಯಲ್ಲಿದ್ದಿರಬಹುದು. ಕ್ರಿ.ಶ. 1230 ರಲ್ಲಿ ರಚಿತವಾದ ''ಲೀಲಾತಿಲಕಂ'' ಎಂಬ ಮೊತ್ತ ಮೊದಲ ಸಾಹಿತ್ಯಾ ಗ್ರಂಥ ಮಲೆಯಾಳಂ ಭಾಷೆಯಲ್ಲಿ ದೊರೆಯುತ್ತದೆ. ಇದಕ್ಕೂ ಹಿಂದೆ ರಚಿತವಾಗಿರುವ ಯಾವ ಸಾಹಿತ್ಯ ಗ್ರಂಥವೂ ಮಲೆಯಾಳಂ ಭಾಷೆಯಲ್ಲಿ ದೊರೆಯುವುದಿಲ್ಲಾ ಮತ್ತೆ ಕೆಲವರು ಕ್ರಿ.ಶ. ಹದಿಮೂರು ಅಥವಾ ಹದಿನಾಲ್ಕನೆಯ ಶತಮಾನದಲ್ಲಿ ರಚಿತವಾದ ''ರಾಮಚರಿತಂ'' ಎಂಬ ಗ್ರಂಥವೇ ಮಲೆಯಾಳಂ ಭಾಷೆಯ ಮೊಟ್ಟ ಮೊದಲ ಗ್ರಂಥವೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಲೀಲಾತಿಲಕಂ ಎಂಬ ಗ್ರಂಥವೇ ಮಲೆಯಾಳಂ ಭಾಷೆಯಲ್ಲಿ ಹೆಚ್ಚು ಪ್ರಾಚೀನ ಗ್ರಂಥವೆಂದು ಕೆಲವರು ಅಭಿಪ್ರಾಯ ವ್ಯಕ್ತಪಡಿಸಿದರೆ ಮತ್ತೆ ಕೆಲವರು ರಾಮಚರಿತಂ ಎಂಬ ಗ್ರಂಥವೇ ಮಲೆಯಾಳ ಭಾಷೆಯಲ್ಲಿ ಹೆಚ್ಚು ಪ್ರಾಚೀನವೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಲೀಲಾತಿಲಕಂ ಹೆಚ್ಚು ಪ್ರಾಚೀನ ಸಾಹಿತ್ಯ ಗ್ರಂಥವಾಗಿ ತೂರಿಬಂದರೂ ಇದನ್ನು ಸಂಸ್ಕೃತ ಭೂಯಿಷ್ಟವಾದ ಮಣಿ ಪ್ರವಾಳ ಶೈಲಿಯಲ್ಲಿ ರಚಿಸಲಾಗಿದೆ. ರಾಮಚರಿತಂ

ಎಂಬ ಗ್ರಂಥ ಇದಕ್ಕೂ ಹಿಂದಿನದು ಎಂಬುದಕ್ಕೆ ಖಚಿತವಾದ ಯಾವ ಆಧಾರಗಳು ದೊರೆಯುವುದಿಲ್ಲಾ ಇದರಲ್ಲಿಯೂ ಸಂಸ್ಕೃತದ ಗಾಢವಾದ ಪ್ರಭಾವವು ಕಂಡು ಬರುತ್ತದೆ. ಮಲೆಯಾಳಂ ಭಾಷೆ ಸಂಸ್ಕೃತದ ಪ್ರಭಾವಕ್ಕೆ ಹೆಚ್ಚು ಒಳಗಾಗಿರುವುದರಿಂದಲೇ ಮಣಿಪ್ರವಾಳ ಶೈಲಿಯಂತಹ ಎಷ್ಟು ಸಾಹಿತ್ಯಾಕ ಹಾಗೂ ಭಾಷಿಕ ಶೈಲಿಗಳು ಕಾಣಿಸಿಕೊಳ್ಳಲು ಸಾಧ್ಯವಾಗಿದೆ, ಮಲೆಯಾಳಂ ಭಾಷೆಯಲ್ಲಿ ಕನ್ನಡ, ತೆಲುಗು, ಭಾಷೆಗಳಿಗಿಂತಲೂ ಹೆಚ್ಚಾಗಿ ಸಂಸ್ಕೃತ ಶಬ್ದಗಳು ಇರುವುದು. ಗೋಚರಿಸುತ್ತದೆ. ತಮಿಳು ಮತ್ತು ಮಲೆಯಾಳಂ ಭಾಷೆ ಸಂಸ್ಕೃತದ ಪ್ರಭಾವಕ್ಕೆ ಒಳಗಾಗಿರುವಷ್ಟು ಮಟ್ಟಿಗೆ ತಮಿಳು ಭಾಷೆ ಸಂಸ್ಕೃತ ಪ್ರಭಾವಕ್ಕೆ ಹೆಚ್ಚು ಒಳಗಾಗಿಲ್ಲ ಇದರಲ್ಲಿ ಸಂಸ್ಕೃತ ಶಬ್ದಗಳು ಬಹಳ ಕಡಿಮೆ.

ಮಲೆಯಾಳಂ ಭಾಷೆಯ ಹಳೆಯ ಸಾಹಿತ್ಯ ಗ್ರಂಥಗಳು ಹೆಚ್ಚು ಕಡಿಮೆ ತಮಿಳು ಭಾಷೆಯ ಸಾಹಿತ್ಯ ಗ್ರಂಥಗಳಂತೆಯೇ ಕಾಣಿಸಿಕೊಳ್ಳುತ್ತವೆ. ಸಂಸ್ಕೃತ ಶಬ್ದಗಳನ್ನು ತೆಗೆದರೆ ಮಲೆಯಾಳಂ ಪೂರ್ಣವಾಗಿ ತಮಿಳು ಭಾಷೆಯನ್ನು ಹೆಚ್ಚು ಹೋಲುವುದು ಮಲೆಯಾಳ ಮತ್ತು ಕೇರಳ ಎಂಬ ಶಬ್ದಗಳು ಸಮನಾರ್ಥ ಶಬ್ದಗಳು ಕ್ರಿ.ಶ. 445 ರಲ್ಲಿ ಮಾಲೆನಾಟ್ಟು ಎಂಬ ಶಬ್ದದೊರಕಿದೆ ಕ್ರಿ.ಪೂ ಮಾರನೇಯ ಶತಮಾನದ ಆಶೋಕನ ಶಿಲಾಶಾಸನಗಳಲ್ಲಿ ಕೇರಳ ಎಂಬ ಶಬ್ದವು ದೊರೆಯುತ್ತದೆ. ಮಲೆಯಾಳಂ ಭಾಷಿ ಕ್ಷೇತ್ರಕ್ಕೆ ಕೇರಳ, ಚೇರ, ಚೇರಳ ಎಂಬ ಹೆಸರುಗಳು ಇದ್ದುವು ಎಂಬುದಕ್ಕೆ ಅನೇಕ ಆಧಾರಗಳು ದೊರೆಯುತ್ತದೆ. ಸಂಸ್ಕೃತದ ಕೆಲವು ಗ್ರಂಥಗಳಲ್ಲಿ ಪಾಂಡ್ಯ, ಚೇರ ಎಂಬ ಶಬ್ದಗಳು ದೊರೆಯುತ್ತವೆ. ಈ ಸಂಸ್ಕೃತದ ಚೇರಳ ಎಂಬುದೇ ಕೇರಳವಾಗಿ ಪರಿವರ್ತನೆಗೊಂಡು ಬೆಳೆದುಬಂದಿರಬಹುದೆಂದು ಕೆಲವರ ಅಭಿಪ್ರಾಯ, ಅಶೋಕನ ಕಾಲದ ಶಿಲಾಶಾಸನಗಳಲ್ಲಿ ದೊರೆಯುವ ಕೇರಳ ಎಂಬ ಶಬ್ದವು ಚೇರಳ ಎಂದಾಗಿರುವುದಕ್ಕೆ ಯಾವ ಆಧಾರಗಳು ದೊರೆಯುವುದಿಲ್ಲಾ ಮೂಲ ದ್ರಾವಿಡ ಕಕಾರವು ಚಕಾರವಾಗಿ ಪರಿವರ್ತನೆಗೊಂಡಿದ್ದು ಇತ್ತೀಚಿಗೆ ಮಾತ್ರ ಈ ದಿಸೆಯಲ್ಲಿ ವಿದ್ವಾಂಸರಲ್ಲಿ ಸಾಕಷ್ಟು ಮತಭೇದಗಳಿವೆ ಕ್ಲೈಮಸ್‌ಗುಂಡರ್ಟ್, ಕಾಲ್ಡವೆಲ್, ಆರ್. ಪ್ರಮೋಲ್ಡ್ ಮುಂತಾದ ಪಾಶ್ಚಾತ್ಯ ವಿದ್ವಾಂಸರು ಮಲೆಯಾಳಂ ಭಾಷೆಯ ಬೇರೆ ಬೇರೆ ವ್ಯಾಕರಣ ಗ್ರಂಥಗಳು ಮತ್ತು ಶಬ್ದಕೋಶಗಳನ್ನು ಸಿದ್ಧಪಡಿಸಿದರು ಮಲೆಯಾಳಂ ಭಾಷೆಯಲ್ಲಿ ಮತ್ತು ವಿ ಎಂಬ ಧ್ವನಿಮಾಗಳು ಬಹಳ ಹಿಂದಿನ ಕಾಲದಿಂದಲೂ ಉಳಿದು ಕೊಂಡು ಬಂದಿದೆ. ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ಮಲೆಯಾಳಂ ಭಾಷೆಯ ವಿವಿಧ ಅಂಶಗಳನ್ನು ಕುರಿತು ವಿವೇಚಿಸಿದವರಲ್ಲಿ ಎಲ್.ವಿ. ರಾಮಸ್ವಾಮಿ ಅಯ್ಯರ್, ಪ್ರಮೋಲ್ಡ್, ಸ್ಪ್ರಿಂಗ್, ಪ್ಲೀಟ್, ಮಾಥೆನ್, ಶೇಷಗಿರಿ ಪ್ರಭು ಮುಂತಾದವರು ಮುಖ್ಯರೆನಿಸಿಕೊಂಡಿದ್ದಾರೆ.

ಮಲೆಯಾಳಂ ಭಾಷೆಯಲ್ಲಿ ಇತರ ದ್ರಾವಿಡ ಭಾಷೆಗಳಂತೆ ಬೇರೆ ಬೇರೆ ಸಾಮಾಜಿಕ ಮತ್ತು ಪ್ರದೇಶಿಕ ಉಪ ಭಾಷೆಗಳಿರುವುದು ಕಂಡುಬರುತ್ತವೆ. ಅವುಗಳಲ್ಲಿ ನರ್ಸಾಣಿ, ಮುಳ್ಳು ಕುರುಂಬ, ನಂಬೂದ್ರಿ, ನಾಯರ್, ಮಾಪ್ಲಾ, ಕುರುಂಬ ಮಲೆಯಾಳಂ, ನಗರಿಮಲೆಯಾಳಂ ರೋಮನ್ ಮಲೆಯಾಳಂ ಮುಂತಾದವು ಮುಖ್ಯವಾಗಿದೆ. ಮಲೆಯಾಳಂ ಭಾಷೆಯಲ್ಲಿ ಪ್ರಾದೇಶಿಕವಾಗಿಯೂ ಬೇರೆ ಬೇರೆ ಉಪ ಭಾಷೆಗಳನ್ನು ಹೆಸರಿಸಿಕೊಳ್ಳಬಹುದು. ಕ್ರಿ.ಶ. 18ನೇಯ ಶತಮಾನದಿಂದ ಈಚೇಗೆ ಮಾತ್ರ ಮಲೆಯಾಳಂ ಭಾಷೆಯಲ್ಲಿ ಸಾಹಿತ್ಯಕ ಮತ್ತು ವ್ಯವಹಾರಿಕ ಮಲೆಯಾಳಂ ಎಂದು ಎರಡು ಬೇರೆ ಬೇರೆ ರೂಪಗಳಿರುವುದನ್ನು ಗುರುತಿಸಿಕೊಳ್ಳಬಹುದು ಇದಕ್ಕೆ ಹಿಂದೆ ಮಲೆಯಾಳಂನ ಈ ರೂಪಗಳಲ್ಲಿ ಹೆಚ್ಚಿನ ವ್ಯತ್ಯಾಸವೇನೂ ಇರಲಿಲ್ಲ ಕಸ್ಸರ್, ಕಸ್ತೂರಿ,

ಕೊನವರ್, ಗುರುವ, ವರದ, ಯರವ, ಕೂಂಗ, ಕೂರವ, ಉರಲಿ, ಪಣಿಯ ವೆತ್ತವ ಮುಂತಾದ ಉಪಭಾಷೆಗಳು ಮಲೆಯಾಳಂ ಭಾಷೆಯಲ್ಲಿವೆ ಎಂದು ಕೆಲವರ ಅಭಿಪ್ರಾಯ.

## ಆ) ಕನ್ನಡ ಭಾಷಾ ವರ್ಗ

ಇದರಲ್ಲಿ ಕನ್ನಡ, ಕೊಡಗು, ಬಡಗ, ಹವ್ಯಕ ಕನ್ನಡ, ಸೋಲಿಗಕನ್ನಡ, ನಾಡವರ್ ಕನ್ನಡ, ಕುರುಂಬ ಕನ್ನಡ ಮುಂತಾದ ಭಾಷೆಗಳು ಮುಖ್ಯವಾಗಿವೆ. ಇವುಗಳಲ್ಲಿ ಕನ್ನಡ ಭಾಷೆಯೇ ಹೆಚ್ಚು ಪ್ರಾಚೀನವಾದದ್ದು, ಇವು ಕನ್ನಡ ಭಾಷೆಯನ್ನೇ ಹೆಚ್ಚು ಹೋಲುತ್ತವೆ. ಕನ್ನಡ ಭಾಷೆತಮಿಳು ಭಾಷೆಯಂತೆ ಮೂಲ ದ್ರಾವಿಡ ಭಾಷೆ ಇಲ್ಲವೇ ಮೂಲ ದಕ್ಷಿಣ ದ್ರಾವಿಡ ಭಾಷೆಯಿಂದ ಹುಟ್ಟಿಬೆಳೆದು ಬಂದಿರಬಹುದೆಂದು ಕೆಲವರ ಅಭಿಪ್ರಾಯ, ಕನ್ನಡದಂತೆ ಕೊಡಗು ಭಾಷೆಯೂ ಕೂಡ ಹೆಚ್ಚು ಪ್ರಾಚೀನವಾದದ್ದು, ಇದಕ್ಕೆ ಲಿಪಿಯ ಸೌಲಭ್ಯವಿಲ್ಲ, ಇದು ಕೂಡ ಮೂಲ ದ್ರಾವಿಡಭಾಷೆ ಅಥವಾ ಮೂಲ ದಕ್ಷಿಣ ದ್ರಾವಿಡ ಭಾಷೆಯಿಂದಲೇ ಹುಟ್ಟಿ ಬೆಳೆದು ಬಂದಿರಬಹುದೆಂದು ಕೆಲವರ ಅಭಿಪ್ರಾಯ. ಇದಕ್ಕೆ ಖಚಿತವಾದ ಯಾವ ಆಧಾರಗಳು ದೊರೆಯುವುದಿಲ್ಲ. ಮತ್ತೆ ಕೆಲವರು ಕೊಡಗು ಮತ್ತು ಬಡಗ ಭಾಷೆಗಳು ಮೂಲ ಕನ್ನಡ ಇಲ್ಲವೇ ಹಳೆಯ ಕನ್ನಡ ಭಾಷೆಯಿಂದ ಹುಟ್ಟಿಬೆಳೆದುಬಂದಿರಬಹುದಾದ ಸಾಧ್ಯತೆಗಳಿವೆ, ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ, ಸೋಲಿಗ, ಹವ್ಯಕಕನ್ನಡ, ನಾಡವರ್ ಕನ್ನಡ, ಕುರುಂಬ ಕನ್ನಡ ಭಾಷೆಗಳು ಹಳೆಯ ಕನ್ನಡ ಭಾಷೆಯಿಂದ ಹುಟ್ಟಿ ಬೇರೆ ಬೇರೆಯಾಗಿ ಬೆಳೆದು ಬಂದ ಭಾಷೆಗಳಾಗಿವೆ. ಈ ಎಲ್ಲ ಭಾಷೆಗಳು ಹೆಚ್ಚು ಕಡಿಮೆ ಕನ್ನಡ ಭಾಷೆಯನ್ನೇ ಹೋಲುವುದರಿಂದ ಇವುಗಳನ್ನು ಕನ್ನಡ ಭಾಷಾ ವರ್ಗ ಎಂದು ಹೆಸರಿಸಿಕೊಳ್ಳಲಾಗಿದೆ.

### 1. ಕನ್ನಡ :

ಇದು ಕರ್ನಾಟಕ ರಾಜ್ಯದ ರಾಜ್ಯ ಭಾಷೆ ಮತ್ತು ಆಡಳಿತ ಭಾಷೆ ಇದನ್ನು ಕರ್ನಾಟಕದಲ್ಲಿ ಮೂರುವರೆ ಕೋಟಿಗೂ ಹೆಚ್ಚು ಜನರು ತಮ್ಮ ಮಾತೃಭಾಷೆಯನ್ನಾಗಿ ಆಡುವವರಿದ್ದಾರೆ. ಭಾರತದ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಸಾವಿರಾರು ಜನರು ಕನ್ನಡ ಭಾಷೆ ಆಡುವವರಿದ್ದಾರೆ. ಇಂದು ದೊರೆಯುವ ಎಲ್ಲಾ ದ್ರಾವಿಡ ಭಾಷೆಗಳನ್ನು ಗಮನಿಸಿದಾಗ ತಮಿಳು ಹೆಚ್ಚು ಪ್ರಾಚೀನ ದ್ರಾವಿಡ ಭಾಷೆಯಾಗಿ ಕಾಣಿಸಿಕೊಂಡರೆ ಕನ್ನಡ ಎರಡನೇಯ ಹೆಚ್ಚು ಪ್ರಾಚೀನ ದ್ರಾವಿಡ ಭಾಷೆಯಾಗಿ ಕಾಣಿಸಿಕೊಳ್ಳುತ್ತದೆ. ಇದಕ್ಕೆ ಸಾಕಷ್ಟು ಆಧಾರಗಳು ದೊರೆಯುತ್ತವೆ.

ಕನ್ನಡ ಕ್ರಿ.ಪೂ. ಐದು ಅಥವಾ ಆರನೆಯ ಶತಮಾನದಲ್ಲಿ ವ್ಯವಹಾರಿಕ ಭಾಷೆಯಾಗಿ ಬಳಕೆಯಲ್ಲಿದ್ದಿತು ಎಂದು ಕೆಲವರ ಅಭಿಪ್ರಾಯ ಕ್ರಿ.ಶ. 450 ರ ಹಲ್ಮಿಡಿ ಶಿಲಾಶಾಸನವು ಕನ್ನಡದಲ್ಲಿ ದೊರೆಯುತ್ತದೆ. ಇದು ಕನ್ನಡದಲ್ಲಿ ದೊರೆಯುವ ಶಿಲಾಶಾಸನಗಳಲ್ಲೆಲ್ಲಾ ಮೊಟ್ಟ ಮೊದಲನೆಯ ಶಿಲಾಶಾಸನ, ಇದಕ್ಕೂ ಹಿಂದೆ ಇದ್ದಿರಬಹುದಾದ ಯಾವ ಶಿಲಾಶಾಸನವು ಕನ್ನಡದಲ್ಲಿ ದೊರೆತಿಲ್ಲ. ಕ್ರಿ.ಶ. 450 ರ ಹೊತ್ತಿಗೆ ಕನ್ನಡ ಸಾಕಷ್ಟು ಪ್ರೌಢವಾಗಿ ಬೆಳೆದಿದ್ದಿತು ಎಂಬುದು ಇದರಿಂದ

ವ್ಯಕ್ತವಾಗುತ್ತದೆ. ಕ್ರಿ.ಶ ಐದನೇಯ ಶತಮಾನ ದಿಂದಲೇ ಕನ್ನಡ ಭಾಷೆಯ ಚರಿತ್ರೆಯು ಆರಂಭವಾಗುತ್ತದೆ. ಕನ್ನಡ ಭಾಷೆ ಹೆಚ್ಚು ಪ್ರಾಚೀನ ಭಾಷೆಯಾಗಿ ತೋರಿ ಬರುತ್ತದೆ. ಮಾತ್ರವಲ್ಲದೆ ಇದು ಉತ್ತಮವಾದ ಸಾಹಿತ್ಯವನ್ನು ಸಂಪಾದಿಸಿಕೊಂಡಿದೆ. ಕ್ರಿ.ಶ. 850ರಲ್ಲಿ ರಚಿತವಾದ ಕವಿರಾಜಮಾರ್ಗ ಎಂಬ ಗ್ರಂಥ ಕನ್ನಡ ಸಾಹಿತ್ಯಾದಲ್ಲಿ ಮೊಟ್ಟ ಮೊದಲ ಸಾಹಿತ್ಯ ಗ್ರಂಥವಾಗಿ ತೋರಿಬರುತ್ತದೆ. ಕ್ರಿ.ಶ. 9ನೇ ಶತಮಾನದಿಂದ ಕನ್ನಡ ಸಾಹಿತ್ಯ ಚರಿತ್ರೆಯು ಆರಂಭವಾಗುತ್ತದೆ. 1260 ರಲ್ಲಿ ರಚಿತವಾದ ಕೇಶಿರಾಜನ ಶಬ್ದಮಣಿದರ್ಪಣ, ಕ್ರಿ.ಶ. 1604 ರಲ್ಲಿ ರಚಿತವಾದ ಭಟ್ಟಾಕಳಂಕಿನ ಶಬ್ದನು ಶಾಸನ ಎಂಬ ವ್ಯಾಕರಣ ಗ್ರಂಥಗಳು ಹಳೆಗನ್ನಡ ವ್ಯಾಕರಣ ಗ್ರಂಥಗಳಲ್ಲಿ ಹೆಚ್ಚು ಹೆಸರು ವಾಸಿಯಾಗಿದೆ, ಕ್ರಿ.ಶ. 1150ರಲ್ಲಿ ರಚಿತವಾದ ಎರಡನೇಯ ನಾಗವರ್ಮನ ಕಾವ್ಯವಲೋಕನ ಮತ್ತು ಭಾಷೆ ಭೂಷಣ ಎಂಬ ಗ್ರಂಥಗಳು ಕನ್ನಡದ ಸ್ವರೂಪವನ್ನು ಸಂಸ್ಕೃತದಲ್ಲಿ ತಿಳಿಸುವ ಮುಖ್ಯವಾದ ವ್ಯಾಕರಣ ಗ್ರಂಥಗಳಾಗಿವೆ. ಈ ಸಂಸ್ಕೃತ ಗ್ರಂಥಗಳಲ್ಲಿ ಕನ್ನಡಕ್ಕೆ ಸಂಬಂಧಿಸಿದ ಅನೇಕ ವಿಚಾರಗಳನ್ನು ವಿವರವಾಗಿ ಹೇಳಲಾಗಿದೆ. ಈ ವ್ಯಾಕರಣ ಗ್ರಂಥಗಳು ಕನ್ನಡ ಭಾಷೆಯ ಪ್ರಾಚೀನತೆಯನ್ನು ಗುರುತಿಸಿಕೊಳ್ಳಲು ನೆರವಾಗಬಹುದೆಂದು ಊಹಿಸಬಹುದಾಗಿದೆ. ಈಜಿಪ್ಟ್‌ನ ಆಕ್ಸಿರಿಂಕಸ್ ಎಂಬ ಗ್ರೀಕ್ ಪ್ರಹಸನವೊಂದರಲ್ಲಿ ದೊರೆಯುವ ಕೆಲವು ಅಪೂರ್ವ ಶಬ್ದಗಳನ್ನು ಆಧರಿಸಿ ಕನ್ನಡ ಭಾಷೆಯು ಕ್ರಿ. ಪೂ. 300 ರ ವೇಳೆಗೆ ಆಸ್ತಿತ್ವದಲ್ಲಿರಬಹುದೆಂದು ಮತ್ತೆ ಕೆಲವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ, ಈ ದಿಕ್ಕಿನಲ್ಲಿ ಯಾವುದನ್ನು ಖಚಿತವಾಗಿ ಹೇಳಲು ಬರುವುದಿಲ್ಲ ಇದಕ್ಕೆ ಖಚಿತವಾದ ಯಾವ ಆಧಾರಗಳು ದೊರೆಯುದಿಲ್ಲ.

ಸಂಸ್ಕೃತ ಮತ್ತು ಪ್ರಾಕೃತ ಗ್ರಂಥಗಳಲ್ಲಿ ಕನ್ನಡ ಎಂಬ ಶಬ್ದಕ್ಕೆ ಕರ್ಣಾಟ, ಕರ್ನಾಟ, ಕರ್ಣಾಟಕ, ಕರ್ನಾಟಕ ಎಂಬ ಪರ್ಯಾಯ ಶಬ್ದಗಳು ದೊರೆಯುತ್ತವೆ. ಇವುಗಳಲ್ಲಿ ಕರ್ಣಾಟ ಮತ್ತು ಕರ್ಣಾಟಕ ಎಂಬ ರೂಪಗಳು ಹೆಚ್ಚು ಪ್ರಾಚೀನವೆಂದು ಕೆಲವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಕರ್ಣಾಟ (ಕ) ಕರ್ನಾಟ (ಕ) ಎಂಬ ರೂಪಗಳಿಂದಲೇ ಕನ್ನಡ ಎಂಬ ಶಬ್ದ ಬೆಳೆದು ಬಂದಿರಬಹುದೆಂದು ಕೆಲವರು ಊಹಿಸಿದರೆ ಮತ್ತು ಕೆಲವರು ಈ ಪ್ರದೇಶದ ಸ್ವಾಭಾವಿಕ ಲಕ್ಷಣಕ್ಕೆ ಅನ್ವಯವಾಗುವಂತೆ ಈ ಪ್ರದೇಶಕ್ಕೆ ಭೌಗೋಳಿಕವಾಗಿ ಕನ್‌ನಾಡು, ಕರ್‌ನಾಡು, ಕರುನಾಡು ಇತ್ಯಾದಿ ಹೆಸರುಗಳಿಂದ ಕನ್ನಡ ಎಂಬ ಶಬ್ದ ನಿಷ್ಪಿನ್ನವಾಗಿರಬಹುದೆಂದು ಊಹಿಸಿದ್ದಾರೆ. ಕರ್‌ನಾಡು, ಕರನಾಡು, ಕರುನಾಡು ಕರಿನಾಡು - ಕನ್ನಡ ಎಂದಾಗಿ ಬೆಳೆದು ಬಂದಿರಬಹುದಾದ ಸಾಧ್ಯತೆಗಳು ಕೂಡ ಇವೆ ಕ್ರಿ.ಶ. 200 ರ "ಶಿಲಪ್ಪಾದಿಕಾರಂ" ಎಂಬ ಪ್ರಾಚೀನ ತಮಿಳು ಸಾಹಿತ್ಯ ಗ್ರಂಥದಲ್ಲಿ ಕನ್ನಡಿಗರನ್ನು ಕರ್‌ನಾಡರ್ ಎಂದು ಕರೆಯಲಾಗಿದೆ. ಇದರ ಜೊತೆಗೆ ಕ್ರಿ.ಶ.770 ಪಾಂಡ್ಯಾರಾಜ್ಯ ಶಿಡೈಯಾನ್ ಪರಾಂತಕನ ವೇಳ್ವಕುಡಿ ಎಂಬ ತಾಮ್ರ ಶಾಸನದಲ್ಲಿ ಕರುನಾಡಗನ್ ಎಂಬ ಕರೆಯಲಾಗಿದೆ., ಈ ಎಲ್ಲಾ ಶಬ್ದಗಳನ್ನು ಗಮನಿಸಿದರೆ ಕನ್ನಡ ಎಂಬ ಶಬ್ದ ಕರ್‌ನಾಡು ಅಥವಾ ಕರ್‌ನಾಡು ಎಂಬುದರಿಂದಲೇ ಹುಟ್ಟಿ ಬೆಳೆದು ಬಂದಿರಬಹುದೆಂದು ಊಹಿಸಲು ಅವಕಾಶಗಳಿವೆ. ಕನ್ನಡ ಎಂಬ ಶಬ್ದದ ನಿಷ್ಪತ್ತಿಯ ಬಗ್ಗೆ ವಿದ್ವಾಂಸರಲ್ಲಿ ಯಾವ ಬಗೆಯ ಒಮ್ಮತವನ್ನು ಕಾಣಲು ಬರುವುದಿಲ್ಲಾ ಇದಕ್ಕೆ ಖಚಿತವಾದ ಯಾವ ಆಧಾರಗಳೂ ದೊರೆಯುವುದಿಲ್ಲಾ.

ಕನ್ನಡದಲ್ಲಿ ದೊರೆಯುವ ಶಿಲಾಶಾಸನಗಳಲ್ಲಿ ಹೆಚ್ಚು ಶಿಲಾಶಾಸನಗಳು ಪೂರ್ವದ ಹಳೆಗನ್ನಡದಲ್ಲಿಯೇ ದೊರೆಯುತ್ತದೆ. ಕನ್ನಡ ಭಾಷೆಯ ಬೆಳವಣಿಗೆಯನ್ನು ಗಮನಿಸಿದರೆ ಅದು ಪೂರ್ವದ ಹಳೆಗನ್ನಡ, ಹಳೆಗನ್ನಡ, ನಡುಗನ್ನಡ ಮತ್ತು ಹೊಸಕನ್ನಡ

ಎಂದು ಬೆಳೆದು ಬಂದಿರಬಹುದು ಕಂಡುಬರುತ್ತದೆ. ಈ ಬೇರೆ ಬೇರೆ ರೂಪಗಳಲ್ಲಿ ಸಾಕಷ್ಟು ವ್ಯತ್ಯಾಸವಿದೆ. ಪೂರ್ವದ ಹಳೆಗನ್ನಡ ಮತ್ತು ಹಳೆಗನ್ನಡಗಳಲ್ಲಿ ಶಬ್ದಗಳು ವ್ಯಂಜನಾಂತ್ಯವಾಗಿದ್ದರೆ, ನಡುಗನ್ನಡ ಮತ್ತು ಹೊಸಗನ್ನಡಗಳಲ್ಲಿ ಶಬ್ದಗಳು ಸ್ವರಾಂತ್ಯಾವಾಗಿದೆ ವಿಜಾತೀಯ ಸಂಯುಕ್ತಾಕ್ಷರಗಳು ಸಜಾತೀಯ ಸಂಯುಕ್ತಾಕ್ಷರಗಳಾಗಿ ಬೆಳೆದುಬಂದಿದೆ ಕನ್ನಡ ಭಾಷೆ ಮಲೆಯಾಳಂ ಭಾಷೆಯಂತೆ ಸಂಸ್ಕೃತದ ಪ್ರಭಾವಕ್ಕೆ ಹೆಚ್ಚು ಒಳಗಾಗಿದೆ. ಇದರಿಂದ ಕನ್ನಡಕ್ಕೆ ಅನೇಕ ಸಂಸ್ಕೃತ ಶಬ್ದಗಳು ಬಂದು ಸೇರಿವೆ ಕನ್ನಡ ಭಾಷೆಯಲ್ಲಿ ತಮಿಳು ಭಾಷೆಯಲ್ಲಿರುವಂತೆ ಸಾಹಿತ್ಯಿಕ ಕನ್ನಡ ಮತ್ತು ವ್ಯವಹಾರಿಕ ಕನ್ನಡವೆಂದು ಎರಡು ರೂಪಗಳು ಕಂಡು ಬರುತ್ತವೆ. ಈ ಎರಡು ರೂಪಗಳಲ್ಲಿ ಸಾಕಷ್ಟು ವ್ಯತ್ಯಾಸಗಳಿವೆ. ಕನ್ನಡದಲ್ಲಿ ತಮಿಳು ಮತ್ತು ಮಲೆಯಾಳಂ ಭಾಷೆಗಳಂತೆ ಅನೇಕ ಸಾಮಾಜಿಕ ಮತ್ತು ಪ್ರಾದೇಶಿಕ ಉಪಭಾಷೆಗಳಿರುವುದು ಕಂಡು ಬರುತ್ತವೆ. ಸಾಮಾಜಿಕ ಪ್ರಬೇಧಗಳಲ್ಲಿ ಬ್ರಾಹ್ಮಣ ಕನ್ನಡ, ಬ್ರಾಹ್ಮಣೇತರರ ಕನ್ನಡ, ಹರಿಜನ ಕನ್ನಡ, ಗಿರಿಜನರ ಕನ್ನಡ ಎಂಬ ರೂಪಗಳು ಮುಖ್ಯವಾಗಿದ್ದರೆ, ಪ್ರಾದೇಶಿಕ ರೂಪಗಳಲ್ಲಿ ಮೈಸೂರುಕನ್ನಡ, ಮಂಗಳೂರು ಕನ್ನಡ ಧಾರವಾಡ ಕನ್ನಡ, ಮುಂತಾದ ರೂಪಗಳ ಮುಖ್ಯವಾಗಿದೆ. ಬಡಗ, ಕೊಡಗು, ಹವ್ಯಕ, ಸೋಲಿಗ, ಕಾಡುಕುರುಂಬ ಭಾಷೆಗಳು ಕೂಡ ಕನ್ನಡವನ್ನೇ ಹೆಚ್ಚು ಹೋಲುವುದರಿಂದ ಇವು ಕನ್ನಡದ ಉಪಭಾಷೆಗಳೇ ಇದ್ದಿರಬಹುದೆಂದು ಕೆಲವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಕನ್ನಡ ಭಾಷೆ ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳು ಪ್ರಭಾವಕ್ಕೆ ಎಷ್ಟೇ ಒಳಗಾಗಿದ್ದರೂ ಇದು ಮೂಲ ದ್ರಾವಿಡ ಭಾಷೆಯ ಅನೇಕ ಅಂಶಗಳನ್ನು ಉಳಿಸಿಕೊಂಡಿದೆ. ಮೂಲ ದ್ರಾವಿಡ ಕ ಕಾರ ಕನ್ನಡ, ಕೊಡಗು, ಬಡಗ ಹವ್ಯಕ, ಸೋಲಿಗ ಮುಂತಾದ ಭಾಷೆಗಳಲ್ಲಿ ಯಾವ ಪರಿವರ್ತನೆಗೂ ಒಳಗಾಗಿಲ್ಲಾ ಇದು ಹಾಗೆಯೇ ಉಳಿದುಕೊಂಡಿದೆ. ಇದು ತಮಿಳು, ಮಲೆಯಾಳಂ, ಮತ್ತು ತೆಲಗು ಭಾಷೆಗಳಲ್ಲಿ ಕೆಲವು ವೇಳೆ ಚಾ ಕಾರವಾಗಿ ಬದಲಾಗಿದೆ. ಈ ಕಾರಣದಿಂದಲೇ ಕೆಲವರು ತೆಲಗು ಮತ್ತು ತಮಿಳು ಭಾಷೆಗಳು ಮೂಲ ದ್ರಾವಿಡದಿಂದ ಅಥವಾ ಮೂಲ ದಕ್ಷಿಣ ದ್ರಾವಿಡ ಭಾಷೆಯಿಂದ ವಿಕಾಸಗೊಳ್ಳುವುದಕ್ಕೆ ಮೊದಲೇ ಕನ್ನಡ ಹುಟ್ಟಿ ಬೆಳೆದು ಬಂದಿರಬಹುದೆಂದು ಊಹಿಸುವವರು. ಈ ದಿಸೆಯಲ್ಲಿ ಆಳವಾದ ಸಂಶೋದನಾ ಕಾರ್ಯ ನಡೆಯವ ಹೊರತು ಯಾವುದನ್ನು ಖಚಿತವಾಗಿ ಹೇಳಲು ಬರುವುದಿಲ್ಲಾ.

## 2. ಕೊಡವ ಭಾಷೆ

ಕೊಡಗು ಭಾಷೆದಕ್ಷಿಣ ದ್ರಾವಿಡ ಭಾಷೆಗಳಾದ ಕನ್ನಡ ತಮಿಳು, ಮಲೆಯಾಳಂ, ತೊದ, ಕೋತ ಭಾಷೆಗಳ ಗುಂಪಿಗೆ ಸೇರುತ್ತದೆ. ನೀಲಗಿರಿಯ ಬಡಗ, ಕುರುಬ, ಇರುಳ, ಕೇರಳದ ಕಾಡಾರ್ ದಕ್ಷಿಣ ಕನ್ನಡ ಜಿಲ್ಲೆಗಳ ಹವ್ಯಕರ ಕನ್ನಡ ಇವುಗಳ ಈ ಗುಂಪಿಗೆ ಸೇರಿದ ಉಪ ಭಾಷೆಗಳು, ಕೊಡವರು ಎಂಬ ಹೆಸರು ಹುಣಸೂರು ಶಾಸನದಲ್ಲಿ ''ಎಲ್ಲಾ ನಾಡ ಕೊಡಗರು ಕೊಡಿ'' ಎಂದು ಇದೆ. ಇದರ ಕಾಲ ಕ್ರಿ.ಶ. 1174 ಕೊಡಗನ್ನು ಕುರಿತು ಬಹುಶಃ ಇದೇ ಮೊದಲ ಉಲ್ಲೇಖವಿರಬಹುದು.

ಕೊಡಗು ಭಾಷೆಯ ವ್ಯಾಕರಣವನ್ನು ಕುರಿತು ಕಳೆದ ಶತಮಾನದಲ್ಲೇ ಕೋಲ್ ಎಂಬಾತ ಪುಸ್ತಕ ರಚಿಸಿದ್ದನು. ಅನಂತರ ಕೊಡಗಿನ ವ್ಯಾಕರಣದ ಜೊತೆಗೆ ಕೊಡಗು ಭಾಷೆಯ ಕೆಲವು ಹಾಡುಗಳನ್ನು ಕೊಡಿಸಿಗ್ರೇಟರ್ ಎಂಬುವನು ಹೊತ್ತಗೆಯೊಂದನ್ನು

ಸಿದ್ದ ಪಡಿಸಿದನು. ಕೊಡಗರು ಹಾಡುಗಳನ್ನು ಪಾಟ್ ಎನ್ನುವರು, ಪುತ್ತರಿಯಾಟ, ಪಾಲಗತ್ತಾಟ, ಕಿಳಕಾಟ, ಉಮ್ಮತ್ತಾಟಗಳಲ್ಲಿ ಈ ಪಟ್‌ಗಳನ್ನು ಕೇಳಬಹುದು.

ತುಳು ಭಾಷೆಗೆ ಈ ಭಾಷೆ ಸಮೀಪತರವಾಗಿದ್ದುದರಿಂದ ಕೊಡಗು ಭಾಷೆ ತುಳು ಭಾಷೆಯಿಂದ ಪರಿವರ್ತನಗೊಂಡಿತೆಂಬ ಭಾವನೆ ವ್ಯಕ್ತಪಟ್ಟದೆ. ಡಾ॥ ಮೋಗ್ಲಿಂಗ್ ಕೊಡಗು ಭಾಷೆ ಕನ್ನಡಕ್ಕಿಂತಲೂ ತಮಿಳು ಮತ್ತು ಮಲೆಯಾಳಂ ಭಾಷೆಗಳನ್ನು ಹೆಚ್ಚು ಹೋಲುತ್ತದೆ ಎಂದಿದ್ದಾರೆ. ರಾಮಸ್ವಾಮಿ ಅಯ್ಯರ್, ಪಿ.ಎಸ್. ಸುಬ್ರಮಣ್ಯಂ ಇದೇ ಅಭಿಪ್ರಾಯ ಪಟ್ಟಿದ್ದಾರೆ. ಈ ಭಾಷೆಯು ಹಳೆಗನ್ನಡ ಮತ್ತು ತುಳು ಬಾಷೆಗಳ ನಡುವೆ ನಿಲ್ಲುವುದೆಂದು ರಾಬರ್ಟ್ ಕಾಲ್ಡ್‌ವೆಲ್ ಅಭಿಪ್ರಾಯಪಟ್ಟಿದ್ದಾರೆ ಕೊಡಗಿನಲ್ಲಿ ವಾಸಿಸುವ ಸುಮಾರು 40 ವಿವಿಧ ಜಾತಿಯ ಜನರಲ್ಲಿ ಕೊಡವರಲ್ಲದೆ ಕೊಡವ ಭಾಷೆಯನ್ನು ಅಮ್ಮೆ ಕೊಡವರು, ಹೆಗ್ಗಡೆಗಳು,ಐರಿಗಳು, ಮೇದರು, ಕುಡಿಯರು, ನಾಯಿಂದರು, ಮಡಿವಾಳ ಕೆಂಬಟ್ಟಿಗಳು ಮುಂತಾದ ವಿವಿಧ ಜಾತಿಯ ಜನರೂ ಮಾತನಾಡುತ್ತಾರೆ. ಈಗಲೂ ಈ ಜನ ತಮ್ಮ ಮೂಲ ಸಂಸ್ಕೃತಿಯ ವೈಶಿಷ್ಯವನ್ನು ಬಹುಮಟ್ಟಿಗೆ ಉಳಿಸಿಕೊಂಡು ಬಂದಿದ್ದಾರೆ, ಕೊಡುವ ಭಾಷೆ - ಸಂಸ್ಕೃತಿ, ಇತಿಹಾಸದ ಬಗೆಗೆ ಸಾಕಷ್ಟು ಅಧ್ಯಯನ ನಡೆದು ಹಲವು ಗ್ರಂಥಗಳು ಪ್ರಕಟಗೊಂಡಿವೆ.

**ಬಡಗ ಭಾಷೆ**

ಬಡಗ ಭಾಷೆ ಕನ್ನಡದ ಒಂದು ಪ್ರಮುಖ ಶಾಖೆ, ಇದನ್ನು ಉಪ ಭಾಷೆಯಾಗಿ ನೋಡಬೇಕೆ ಇಲ್ಲವೆ ಭಾಷೆಯೆಂದು ನಿರೂಪಬೇಕೇ ಎಂಬಚರ್ಚೆಯಿದ್ದರೂ ಪ್ರತ್ಯೇಕ ದ್ರಾವಿಡ ಭಾಷೆ ಯಾಗಿಯೇ ಪರಿಗಮಿಸಬೇಕಾಗುತ್ತದೆ.

ಬಡಗ ನೀಲಗಿರಿ ಬೆಟ್ಟದ ನಿವಾಸಿಗಳು ಹೂಯ್ಸಾಳ ದೊರೆಗಳು ಸೈನ್ಯ ನೀಲಗಿರಿಯನ್ನು ಮುತ್ತಿಗೆ ಹಾಕಿದಾಗ ಕಾಳೆನೆಂಬ ಹೆಸರಿಸಿ ದೊರೆಯೊಬ್ಬನು ತೀವ್ರವಾಗಿ ಎದುರಿಸಿದನಂದು ಚಾಮರಾಜನಗರದ ಶಾಸನದಲ್ಲಿ ಉಲ್ಲೇಖಿಸಿದೆ. ಚಾಮರಾಜನಗರದ ತಾಲ್ಲೋಕಿನ ಬಾಗಳ ಗ್ರಾಮದ 1142 ರ ಶಾಸನವೊಂದರಲ್ಲಿ ''ನಿರುಗಂಡ ನಾಡಾಳ್ವ ಎಡನಾಡ ಹಿರಿಯ ನಾಡ ಬೆಸದಿಂ ನೀಲಗಿರಿಯ ಕೋಟೆಯ ಯಶಬರಹ ಮೀಗಣಕೊಳ್ಕಲ್ಲ, ಕೋಟೆಗೆ ಹಾಕಿ ಮುತ್ತಿ ಕೋಟೆಯ ನಾಯಕನ ಮಗನಂ ಕೊಂದು ಮತ್ತೆ ದಿರಾಂತ ಬಂಮಂ ಕೂಡಾಡಿಕೊಂಡು ಕಣ ಶೂರತೆ ಬಂಟನಾಗಿ ಸ್ವರ್ಗಸ್ತನಾದ'' ಎಂದಿದೆ.

ಆದಿವಾಸಿಗಳಾದ ಬಡಗರು ಬೆಟ್ಟದ ಮೇಲುಗಡೆ ಸಾಲು ಸಾಲಾಗಿ ಕಟ್ಟಿದ ಗುಡಿಸಲುಗಳಲ್ಲಿ ವಾಸಿಸುವರು. ಬಡಗ ಭಾಷಿಕಕನ್ನಡಕ್ಕೆ ತೀರಹತ್ತಿರವಾದ ಭಾಷೆಯಾದರೂ ಅಂತರವೂ ಇದೆ. ತೊದ ಮತ್ತು ಬಡಗ ಭಾಷೆಗಳು ಬಹಳ ಕಾಲದಿಂದಲೂ ಅಕ್ಕಪಕ್ಕದ ಭಾಷೆಗಳಾಗಿ ಬೆಳೆದು ಬಂದಿರುವುದರಿಂದ ಈ ಭಾಷೆಗಳಲ್ಲಿ ಕೂಡು - ಕೊಳ್ಳು ನಡೆದಿದೆ. ಬಡಗ ಭಾಷೆ, ಹವ್ಯಕ ಭಾಷೆ ಯಂತೆ ಹಳಗನ್ನಡದ ಬಂದು ಉಪ ಶಾಖೆಯ ಹಾಗೆ ತೋರುತ್ತದೆ.



4. **ಹವ್ಯಕ**

ಕರ್ನಾಟಕ ರಾಜ್ಯದ ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಸುತ್ತಮುತ್ತ ಪ್ರದೇಶಗಳಲ್ಲಿ ಹವ್ಯಕ ಭಾಷೆಯನ್ನು ಆಡುವವರಿದ್ದಾರೆ. ಇವರನ್ನು ಹವ್ಯಕರು ಎಂದು ಕರೆಯಲಾಗುತ್ತದೆ. ಇವರು ಬ್ರಾಹ್ಮಣರಾದ್ದರಿಂದ ಹವ್ಯಕ ಬ್ರಾಹ್ಮಣರೆಂದು

ಕರೆಯಲಾಗುತ್ತದೆ. ಹವ್ಯಕ ಭಾಷೆ ಹಳೆಗನ್ನಡ ಭಾಷೆಯನ್ನು ಹೆಚ್ಚು ಹೋಲುತ್ತದೆ. ಅಲ್ಲದೆ ಇದರಲ್ಲಿ ಹಳೆಗನ್ನಡದ ಅನೇಕ ಅಂಶಗಳು ಕಂಡು ಬರುತ್ತದೆ. ಆದ್ದರಿಂದಲೇ ಹವ್ಯಕ ಮೂಲ ಕನ್ನಡ ಭಾಷೆಯಿಂದ ಹುಟ್ಟಿದೆ ಎಂಬುದು ಕೆಲವರ ಅಭಿಪ್ರಾಯ, ಇದರಲ್ಲಿ ಮಲೆಯಾಳಂ ತುಳು, ತಮಿಳು ಭಾಷೆಯ ಪ್ರಬಾವ ಕಂಡು ಬರುವುದು ತುಳುಭಾಷೆಯ ಅನೇಕ ಅಂಶಗಳು ಹವ್ಯಕ ಕನ್ನಡದಲ್ಲಿ ದೊರೆಯುತ್ತವೆ. ಇದರಲ್ಲಿ ಕೆಲವು ಪ್ರಾದೇಶಿಕ ರೂಪಗಳಿವೆ, ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಹವ್ಯಕ ರೂಪಗಳು ಇಲ್ಲಿ ಮುಖ್ಯವಾಗಿ ಇವುಗಳಲ್ಲಿಯೂ ಸಾಕಷ್ಟು ವ್ಯತ್ಯಾಸಗಳಿವೆ.

5. ಸೋಲಿಗ

ಬಿಳಿಗಿರಿರಂಗನ ಬೆಟ್ಟದ ಸುತ್ತಮುತ್ತಲ ಪ್ರದೇಶಗಳಲ್ಲಿ ಹೆಗ್ಗಡ ದೇವಕೋಟೆ, ನಾಗರಹೊಳೆ ಮುಂತಾದ ಕಡೆ ಗುಡ್ಡಗಾಡುಗಳಲ್ಲಿ ಸೋಲಿಗರು ವಾಸಿಸುತ್ತರೆ. 1964 ರಲ್ಲಿ ಇವರನ್ನು ಗುರುತಿಸಲಾಗಿದೆ.ಸೋಲಿಗ ಭಾಷೆ ಪೂರ್ಣವಾಗಿ ಕನ್ನಡವನ್ನು ಹೋಲುತ್ತದೆ. ಅದ್ದರಿಂದಲೇ ಇದನ್ನು ಸೋಲಿಗ ಕನ್ನಡ ಎಂತಲೂ ಕರೆಯಲಾಗಿದೆ. ಇದರಲ್ಲಿ ತಮಿಳು ಭಷೆಯ ಪ್ರಭಾವ ಹೆಚ್ಚಾಗಿ ಕಂಡು ಬರುತ್ತದೆ. ಕೆಲವರು ಈ ಭಾಷೆ ಕನ್ನಡದ ಉಪಭಾಷೆ ಇರಬಹುದೆಂದು ಊಹಿಸಿದ್ದಾರೆ. ಇದರಲ್ಲಿ ಹವ್ಯಕ, ಬಡಗ ಭಾಷೆಗಳಂತೆ ಹಳೆಗನ್ನಡದ ಅನೇಕ ಅಂಶಗಳು ಇರುವುದು ಕಂಡು ಬರುತ್ತದೆ. ಸೋಲಿಗ ಕನ್ನಡದಲ್ಲಿ ಬಡಗ ಭಾಷೆಯಂತೆ ವ ಕಾರ ಹ ಕಾರವಾಗಿಲ್ಲ, ಕೆಲವು ವಿದ್ವಾಂಸರು ಕ್ರಿ.ಶ. ಹತ್ತನೆಯ ಶತಮಾನಕ್ಕೆ ಹಿಂದೆಯೇ ಹಳೆಗನ್ನಡದ ಅಥವಾ ಪೂರ್ವದ ಹಳೆಗನ್ನಡ ಭಾಷೆಯಿಂದ ಇದು ಹುಟ್ಟಿ ಬೆಳೆದು ಬಂದಿರಬಹುದೆಂದು ಊಹಿಸಿದ್ದಾರೆ.

6. ಕುರುಬ

ತಮಿಳುನಾಡು, ಕೇರಳ, ಕರ್ನಾಟಕ ರಾಜ್ಯಗಳ ಬೇರೆ ಬೇರೆ ಭಾಗಗಳಲ್ಲಿ ಬೆಟ್ಟಗುಡ್ಡಗಳಲ್ಲಿ ಕುರುಬರು ಕಂಡು ಬರುತ್ತಾರೆ. ಇವರನ್ನು ಕುರುಂಬರು ಎಂದು ಕರೆಯುತ್ತಾರೆ. ಕರ್ನಾಟಕ ಭಾಗದ ಕುರುಂಬ ಭಾಷೆ ಕನ್ನಡವನ್ನು ಹೋಲುವಂತಿದ್ದರೆ ತಮಿಳು ನಾಡಿನ ಕುರುಂಬ ಭಾಷೆ ತಮಿಳು ಭಾಷೆಯನ್ನು ಹೋಲುತ್ತದೆ. ಕೇರಳದಲ್ಲಿ ಕಂಡುಬರುವ ಕುರುಂಬ ಭಾಷೆ ಮಲೆಯಾಳಂ ಭಾಷೆಯನ್ನು ಹೋಲುತ್ತದೆ. ಹೀಗಾಗಿ ಆಯಾ ರಾಜ್ಯ ಭಾಷೆಗಳ ಉಪ ಭಾಷೆಯಾಗಿ ಕುರಂಬ ನಿಲುತ್ತದೆಂದು ಕೆಲವರ ಅಭಿಪ್ರಾಯ ಇದರ ಬಗೆ ಸಂಶೋಧನಾ ಕಾರ್ಯ ಇನ್ನು ನಡೆಯಬೇಕಾಗಿದೆ.

ಕರ್ನಾಟಕದ ಕುರುಂಬರನ್ನು ಊರು ಕುರುಂಬರು ಮತ್ತು ಕಾಡ ಕುರುಂಬರು ಎಂದು ಎರಡು ವರ್ಗಗಳನ್ನು ವರ್ಗೀಕರಿಸಿ ಕೊಳ್ಳಲಾಗುತ್ತದೆ. ಊರು ಕುರುಬರು ಕನ್ನಡ ಭಾಷೆಯನ್ನು ಆಡುವರು, ಕಾಡಕುರುಂಬರು ಮಾತ್ರ ಬೇರೆ ಬೇರೆ ಭಾಷೆ ಆಡುತ್ತಾರೆ. ಇವರಲ್ಲಿ ಬೆಟ್ಟಕುರುಬ, ಕಾಡ ಕುರುಬ, ಜೇನು ಕುರುಬ, ಆನೆ ಕುರುಬ, ಬೇವಿನ ಕುರುಬ , ಪಂಜಿನ ಕುರುಂಬ, ಮುಳ್ಳು ಕುರುಬ, ಕೊಳ್ಳಿಕುರುಬ ಮುಂತಾದವರು ಮುಖ್ಯರೆನಿಸಿಕೊಂಡಿದ್ದಾರೆ ವೃತ್ತಿಗಳು ಸಹ ಇವರಲ್ಲಿ ಭಿನ್ನವಾಗಿದ್ದು ಆಡುವ ಭಾಷೆ ಸಹ ಭಿನ್ನವಾಗಿದೆ. ಇದರ ಬಗೆಗಿನ ಶೋಧನಾ ಕಾರ್ಯ ನಡೆಯಬೇಕಾಗಿದೆ.

## ಇ) ತುಳು ಭಾಷಾವರ್ಗ

ಇದರಲ್ಲಿ ತುಳು, ಕೊರಗ, ಮತ್ತು ಬೆಲ್ದರಿ ಮುಂತಾದ ಭಾಷೆಗಳು ಮುಖ್ಯವಾಗಿವೆ. ಇವುಗಳಲ್ಲಿ ತುಳು ಬಹಳ ಮುಖ್ಯವಾದದ್ದು ಕೊರಗ ಮತ್ತು ಬೆಲ್ದರಿ ಭಾಷೆಗಳು ತುಳು ಭಾಷೆಯನ್ನು ಹೆಚ್ಚು ಹೋಲುತ್ತವೆ. ಆದುದರಿಂದಲೇ ಇವು ತುಳು ಭಾಷೆಯ ಉಪ ಭಾಷೆಗಳಿರಬಹುದೆಂದು ಕೆಲವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇವು ಹಳೆಯ ತುಳು ಭಾಷೆಯಿಂದ ಹುಟ್ಟಿ ಬೆಳೆದು ಬಂದಿರಬಹುದೆಂದು ಕೆಲವರು ಊಹಿಸಿದ್ದಾರೆ. ಇವು ತುಳು ಭಾಷೆಯನ್ನು ಹೆಚ್ಚು ಹೋಲುವುದರಿಂದ ಇದನ್ನು ತುಳು ವರ್ಗ ಎಂದು ಹೆಸರಿಸಿಕೊಳ್ಳಲಾಗಿದೆ.

### 1. ತುಳು ಭಾಷೆ

ತುಳು ಭಾಷೆಯನ್ನು ಆಡುವ ಪ್ರದೇಶ ಮೊದಲು ಮದರಾಸು ಪ್ರಾಂತ್ಯಕ್ಕೆ ಸೇರಿತ್ತು. ಈಗ ವಿಶಾಲ ಕರ್ನಾಟಕಕ್ಕೆ ಸೇರಿದೆ ಕನ್ನಡ ನಾಡಿನ ತೆಂಕಣ ಹಾಗೂ ಪಡುವಣಕ್ಕೆ ಸಮುದ್ರ ತೀರ ಪ್ರದೇಶದಲ್ಲಿ ವಿಶೇಷವಾಗಿ ಮಂಗಳೂರಿನ ಸುತ್ತ ಮುತ್ತ ಕಲ್ಯಾಣ ಪುರಿ ಮತ್ತು ಚಂದ್ರಗಿರಿ ನದಿಯ ನಡುವೆ ತುಳು ಭಾಷೆಯನ್ನು ಆಡುವರು ಸುಮಾರು ಏಳು ಲಕ್ಷ ಜನ ಸಂಖ್ಯೆಯ ತುಳು ಭಾಷೆ ಕನ್ನಡದ ನಂಟನ್ನು ಹೊಂದಿ ಕನ್ನಡದ ಸೆರಗಿನಲ್ಲಿ ಎಂಟು ಶತಮಾನಗಳಿಂದ ಬಾಳುತ್ತಿದೆ. ತುಳು ಎಂಬ ಶಬ್ದ ಯಾವ ಕಾಲದಲ್ಲಿ ಬಳಕೆಗೆ ಬಂತೆಂಬುದು ನಿಶ್ಚಯವಾಗಿ ಗೊತ್ತಿಲ್ಲ. ಹನ್ನೆರಡೆಯ ಶತಮಾನದ ಪೂರ್ವಾದದ ವಿಷ್ಣುವರ್ಧವನನ ಕಾಲದ ಶಾಸನವೊಂದರಲ್ಲಿ ಬರುವ ಪದ್ಯದಲ್ಲಿ ತುಳು ಎಂಬ ಪದವಿದೆ ಇದು ಈ ಭಾಷೆಯ ಹಳೆಯ ಉಲ್ಲೇಖವೆಂದು ತೋರುತ್ತದೆ.

'' ಧಾರಣಿಯೊಳಗಚ್ಚರಿ ತುಳು ದೇಶದ ಗೇರಸಪ್ಪೆಯ ನೃಪವರನೂ'' ಎಂದು ಸ್ಥಾಪನಿಸಿದ್ದಾನೆ ಹನ್ನೆರಡನೆಯ ಶತಮಾನದ ಈ ಶಾಸನದ ಮಾತು. ಹರಿಹನರ ಬಸವರಾಜ ದೇವರಗಳೆ ಸುಮಾರು ೧೨೧೦ ಉಲ್ಲೇಖವನ್ನು ಬಿಟ್ಟರೆ ಸುಮಾರು ೧೫೫೦ಕೋಟೇಶ್ವರನೆಂಬ ಜೈನ ಕವಿ ತನ್ನ ಜೀವಂಧರ ಷಟ್ಪದಿ ಕಾವ್ಯದಲ್ಲಿ ತುಳು ಮಹೇದೇಶದೊಳು ಬಯಿದೊರೊಳಗೆ ಎಂಬಲ್ಲಿ ಮತ್ತು ಆದಿಯಪ್ಪ ಕವಿಯ 'ಧಾನ್ಯ ಕುಮಾರ ಚರಿತ್ರೆ ತುಳು ಪ್ರಸ್ತಾಪ ದೊರೆಯುತ್ತದೆ. ತುಳು ಭಾಷೆಯನ್ನು ಕುರಿತು ಮಮತೆಯನ್ನು ತೋರಿದ ಕವಿ ಎಂದರೆ ರತ್ನಾಕರ ವರ್ಣಿ. ತುಳುವರು ಮೆಚ್ಚಿಕೊಂಡಾಡುವಂತೆ ಕಾವ್ಯ ಬರೆದಿರುವಾಗಿ ಅವನು ನಿವೇದಿಸಿದ್ದಾನೆ ವಿಜಯನಗರದ ಕೃಷ್ಣದೇವರಾಯನು ತೌಳವ ವಂಶದವನೆನ್ನ ಲಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ಹಾಗೂ ಇತರ ಕಡೆಗಳಲ್ಲಿನ ಕೆಲವು ಶಾಸನಗಳಲ್ಲಿ ತುಳು ತಳುವ ಪದಗಳಿವೆ. ತುಳು ಎಂಬ ಪದಕ್ಕೆ ಮೃದು ಎಂಬ ಅರ್ಥವೆಂದು ಹೇಳುವರು ದ್ರಾವಿಡ ಭಾಷಾ ಬುಡುಕಟ್ಟಿಗೆ ಸೇರಿದ ತುಳು ಭಾಷೆಯ ಆರಂಭ ಬೆಳವಣಿಗೆ ಮತ್ತು ವಿಕಾಸಗಳನ್ನು ವಿವರಿಸಲು ಸಿಗುವ ಸಾಮಗ್ರಿ ಗ್ರಂಥಗಳು ಶಾಸನಗಳು ಮತ್ತು ಉಲ್ಲೇಖಗಳು ತೀರ ಕಡಿಮೆ ಪಾಡ್ದನ (ಪಾಡ್ದನೆ - ಸಂ ಪ್ರಾರ್ಥನೆ) ಎಂಬ ಜನಪದ ಸಾಹಿತ್ಯವಿದೆ ತುಳು ನಾಡಿನ ಬೀರಸಿರಿ (ವೀರಶ್ರೀ)ಯರನ್ನು ಕೊಂಡಾಡುವ ಚಾರಿತ್ರಿಕ ಹಿನ್ನೆಲೆಯ ಕಾವ್ಯಮಯ ಗದ್ಯ ರಚನೆ ಪಾಡ್ದನ ಸಂದಿಗಳೆಂಬ ಹಾಡುಗಬ್ಬಗಳೂ ಇವೆ ಇವುಗಳ ನೆರವಿನಿಂದ ತುಳು - ಕನ್ನಡ ತುಳು - ತಮಿಳು ತುಳು - ಮಲಯಾಳಂ. ತುಳು - ಕೊಂಕಣಿ ಈ ಭಾಷೆಗಳ ಸಂಬಂಧ ಸ್ವರೂಪ ತಿಳಿಯಬಪೇಕು. ತುಳು ಮತ್ತು ಕನ್ನಡದ ಸಂಬಂಧ ಅತ್ಯಂತ ನಿಕಟವಾದುದು. ಬಂದು ಕಡೆ ಕನ್ನಡ

ಭಾಷೆ ಇನ್ನೊಂದು ಕಡೆ ಮಲೆಯಾಳಂ ಜೊತೆಗೆ ಇಂಡೊ - ಆರ್ಯನ್ ಪರಿವಾರದ ಕೊಂಕಣಿ ಈ ಮೂರು ಭಾಷೆಗಳ ಆವರಣದಲ್ಲಿ ತುಳು ಭಾಷೆ ಇದೆ.

ತುಳು ಭಾಷೆಯನ್ನು ಬರೆಯಲು ಕನ್ನಡ ಲಿಪಿಯ ಜೊತೆಗೆ ಮಲಯಾಳಂ ಲಿಪಿಯನ್ನು ಬಳಸುವರು ಕನ್ನಡ ಲಿಪಿಯನ್ನು ಹೆಚ್ಚು ಉಪಯೋಗಿಸುವರು ಬ್ಯಾಸೆಲ್ ಮಿಷನ್ನಿನವರು ಮೊದಲು ತುಳು ಪುಸ್ತಕಗಳನ್ನು ಕನ್ನಡ ಲಿಪಿಯಲ್ಲೇ ಅಚ್ಚು ಹಾಕಿಸಿದರು ಇಂದು ಕನ್ನಡ ಲಿಪಿಯೇ ತುಳು ಲಿಪಿಯೂ ಆಗಿದೆ ದಕ್ಷಿಣ ಕನ್ನಡದಲ್ಲಿ ಜೈನರು ಬ್ರಾಹ್ಮಣರು ಶೂದ್ರರು, ಬಂಟರು, ಕ್ರೈಸ್ತರು, ಗೌಡರು , ಗಾಣಿಗರು - ಎಲ್ಲ ಜಾತಿಯವರೂ ತುಳು ಭಾಷೆಯನ್ನು ಆಡುತ್ತಾರೆ ಇವರಲ್ಲಿ ಅನೇಕರಿಗೆ ತುಳುವೇ ಮಾತೃಭಾಷೆ ೧೯೬೦ ರಿಂದೀಚೆಗೆ ಈ ಭಾಷೆಯನ್ನು ಕುರಿತು ಮಹತ್ತರವಾದ ಕ್ಷೇತ್ರ ಕಾರ್ಯಧಾರದ ಸಂಶೋಧನೆ ಕೆಲಸ ನಡೆದಿದೆ. ಉಡುಪಿ ಎಂ.ಜಿ.ಎಂ. ಸಂಸ್ಥೆಯ ತುಳು ನಿಘಂಟು ದ್ರಾವಿಡ ಭಾಷೆಗಳ ತೌಲನಿಕ ಅಧ್ಯಯನಕ್ಕೆ ಆಕರ ಸ್ವರೂಪದ್ದು.

ತುಳು ಭಾಷೆಯನ್ನು ತಮಿಳಿನೊಡನೆ ಮಲೆಯಾಳಂ ನೊಡನೆ ತುಲನೆ ಮಾಡಿದರೂ ವ್ಯತ್ಯಾಸವಿದೆ. ಕನ್ನಡ ಭಾಷೆಯೊಡನೆ ಹೋಲಿಸಿದರೆ ಉಳಿದ ಎರಡು ಭಾಷೆಗಳೊಡನೆ ಹೋಲಿಸುವಾಗ ಕಾಣುವಷ್ಟು ಪ್ರಮಾಣದ ಅಂತರ ಕಾಣುವುದಿಲ್ಲ. ಕನ್ನಡದ ಬೆಳವಣಿಗೆಯ ಯಾವುದೇ ಒಂದು ಘಟ್ಟದಲ್ಲಿ ಪ್ರತ್ಯೇಕವಾಗಿ ಉಳಿದುತುಳು ಭಾಷೆಯಾಗಿ ಬೆಳೆಯಿತೆಂದು ತೋರುತ್ತದೆ. ಕೊಡಗು ಭಾಷೆಯೊಂದಿಗೆ ತೋರುವ ಸಾಮೀಪ್ಯವನ್ನೂ ಕಡೆಗಣಿಸುವಂತಿಲ್ಲ

2. ಕೊರಗ

ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿ ಮಂಗಳೂರು, ಕಾರ್ಕಳ, ಕುಂದಾಪುರ ಮುಂತಾದ ಕಡೆಗಳಲ್ಲಿ ಆದಿವಾಸಿ ಜನಾಂಗಕ್ಕೆ ಸೇರಿದ ಐದು ಸಾವಿರಕ್ಕೂ ಹೆಚ್ಚು ಜನರು ಕೊರಗ ಭಾಷೆಯನ್ನು ಆಡುವವರಿದ್ದಾರೆ. ಇದು ತುಳು ಭಾಷೆಯನ್ನು ಹೆಚ್ಚು ಹೋಲುತ್ತದೆ. ಅದ್ದರಿಂದಲೇ ಕೆಲವರು ಇದನ್ನು ಕೊರಗ ತುಳು ಎಂತಲೂ ಕರೆಯುವರು. ಡಿ.ಎನ್. ಶಂಕರಭಟ್ಟ ಅವರು ಇದು ತುಳು ಭಾಷೆಯ ಉಪಭಾಷೆಯೆಲ್ಲವೆಂದು ಇದು ಸ್ವತಂತ್ರ್ಯ ಹಾಗೂ ಪ್ರತ್ಯೇಕವಾದ ದ್ರಾವಿಡ ಭಾಷೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಕೊರಗ ಭಾಷೆ ತುಳು ಭಾಷೆಗಿಂತಲೂ ಉತ್ತರ ದ್ರಾವಿಡ ಭಾಷಾ ವರ್ಗಕ್ಕೆ ಸೇರಿದ ಕುರುಖ್ ಭಾಷೆಯನ್ನು ಹೆಚ್ಚು ಹೋಲುವುದೆಂದು ಮತ್ತೆ ಕೆಲವರ ಅಭಿಪ್ರಾಯ, ಕೊರಗ ಭಾಷೆಯಲ್ಲಿಯೂ ಮೂಡುಕೊರಗ, ತಪ್ಪುಕೊರಗ, ಒಂಟಿಕೊರಗ ಎಂಬ ಮೂರು ರೂಪಗಳು ಬಳಕೆಯಲ್ಲಿವೆ. ಈ ಬೇರೆ ಬೇರೆ ಕೊರಗ ರೂಪಗಳಲ್ಲಿ ತುಳು, ಕನ್ನಡ ಮತ್ತು ತಮಿಳು ಭಾಷೆಗಳ ಪ್ರಭಾವವು ಕಂಡು ಬರುವುದು, ಕೊರಗ, ತುಳು, ಮತ್ತು ಬೆಲ್ದರಿ ತುಳು ಭಾಷೆಗಳಲ್ಲಿ ಸಾಕಷ್ಟು ವ್ಯತ್ಯಾಸವು ಕಂಡು ಬರುತ್ತದೆ. ಇವು ಹಳೆಯ ತುಳು ಭಾಷೆಯಿಂದ ಹುಟ್ಟಿ ಬೇರೆ ಬೇರೆಯಾಗಿ ಬೆಳೆದುಬಂದಿರಬಹುದುದೆಂದು ಕೆಲವರು ಊಹಿಸಿದ್ದಾರೆ.

ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ, ಭಟ್ಕಳ, ಕಾರ್ಕಳ ಮುಂತಾದ ಕಡೆಗಳಲ್ಲಿ ಬೆಲ್ದರಿ ಭಾಷೆಯನ್ನು ಆಡುವ ವರಿದ್ದಾರೆ, ಇದು ಹೆಚ್ಚು ತುಳು ಭಾಷೆಯನ್ನು ಹೋಲುವುದರಿಂದ ಇದನ್ನು ಬೆಲ್ದರಿ ತುಳು ಎಂದು ಕರೆಯಲಾಗಿದೆ. ಅರಣ್ಯ

ಪ್ರದೇಶಗಳಲ್ಲಿ ದೊರೆಯುವ ಬಳ್ಳಿಗಳನ್ನು ಸಂಗ್ರಹಿಸಿ ಅವುಗಳಿಂದ ಬುಟ್ಟಿಗಳನ್ನು ತಯಾರಿಸುವುದು ಇವರ ಮುಖ್ಯ ಕಸುಬು, ಇದರಲ್ಲಿ ತುಳು ಮತ್ತು ಕನ್ನಡ ಭಾಷೆಗಳ ಪ್ರಬಾವವು ಕಂಡುಬರುತ್ತದೆ. ಇದನ್ನು ಬೆಳ್ಳಾರಿ ಎಂತಲೂ ಕರೆಯುವರು.

**ಈ) ತೆಲುಗು ಭಾಷಾ ವರ್ಗ**

ಇದರಲ್ಲಿ ತೆಲುಗು ಸಾವರ, ಮನ್ನೆ, ವಡ್ಡರಿ, ಮನದಿ, ಚಂಚು, ಗೊಲ್ಲರಿ, ದೊಂಬ, ಜುರಯ್ ದಾಸರಿ, ಕೊಮ್ಮವು, ಬೇರಡಿ , ಮುಂತಾದ ಭಾಷೆಗಳು ಸೇರುತ್ತವೆ ಇವುಗಳಲ್ಲೆಲ್ಲಾ ತೆಲುಗು ಭಾಷೆಯೇ ಹೆಚ್ಚು ಪ್ರಾಚೀನವಾದದ್ದು ಈ ಎಲ್ಲಾ ಭಾಷೆ ಮತ್ತು ಉಪ ಭಾಷೆಗಳು ತೆಲುಗು ಭಾಷೆಯನ್ನು ಹೆಚ್ಚು ಹೋಲುತ್ತವೆ. ಇವು ಹಳೆಯ ತೆಲುಗು ಭಾಷೆಯಿಂದಹುಟ್ಟಿ ಬೆಳೆದು ಬಂದಿರಬಹುದೆಂದು ಕೆಲವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಈ ಎಲ್ಲಾ ಭಾಷೆಗಳು ತೆಲುಗು ಭಾಷೆಯನ್ನೇ ಹೆಚ್ಚು ಹೋಲುವುದರಿಂದ ಇವುಗಳನ್ನು ತೆಲುಗು ಭಾಷಾವರ್ಗ ಎಂದು ಹೆಸರಿಸಿ ಕೊಳ್ಳಲಾಗಿದೆ. ತೆಲುಗು ಕೆಲವು ಅಂಶಗಳಲ್ಲಿ ದಕ್ಷಿಣ ದ್ರಾವಿಡ ಭಾಷೆಗಳನ್ನು ಮತ್ತೆ ಕೆಲವು ಅಂಶಗಳಲ್ಲಿ ಮಧ್ಯದ್ರಾವಿಡ ಭಾಷೆಗಳನ್ನು ಹೆಚ್ಚು ಹೋಲುತ್ತದೆ. ತೆಲುಗಿನಲ್ಲಿ ಕೆಲವು ದಕ್ಷಿಣ ದ್ರಾವಿಡಾಂಶಗಳು ಮತ್ತು ಕೆಲವು ಮಧ್ಯ ದ್ರಾವಿಡಾಂಶಗಳು ಇರುವ ಕಾರಣದಿಂದ ಇದನ್ನು ಮಧ್ಯವರ್ತಿ ಭಾಷೆಯನ್ನಾಗಿ ಪರಿಗಣಿಸಿಕೊಳ್ಳಲಾಗುತ್ತಿದೆ. ಮಧ್ಯ ಮತ್ತು ದಕ್ಷಿಣ ದ್ರಾವಿಡ ಭಾಷೆಗಳ ಬೇರೆ ಬೇರೆ ಅಂಶಗಳನ್ನು ಹೊಂದಿರುವ ತೆಲುಗು ಭಾಷೆ ಮೂಲತಃ ಮೂಲ ದ್ರಾವಿಡ ಭಾಷೆಯಿಂದಲೇ ಹುಟ್ಟಿ ಬೆಳೆದು ಬಂದಿರಬಹುದೆಂದು ಕೆಲವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇದನ್ನು ಗಮನಿಸಿದ ಮತ್ತೆ ಕೆಲವರು ತೆಲುಗು ಭಾಷೆ ಇತರ ದ್ರಾವಿಡ ಭಾಷೆಗಳಂತೆ ಮೂಲ ದಕ್ಷಿಣ ದ್ರಾವಿಡ ಭಾಷೆಯಿಂದ ಹುಟ್ಟಿಬೆಳೆದು ಬಂದಿರಬಹುದೆಂದು ಊಹಿಸಿದರೆ ಇನ್ನು ಕೆಲವರು ಇದು ಮೂಲ ಮಧ್ಯ ದ್ರಾವಿಡ ಭಾಷೆಯಿಂದ ಹುಟ್ಟಿ ಬೆಳೆದು ಬಂದಿರಬಹುದೆಂದು ಊಹಿಸಿದ್ದಾರೆ.

**1) ತೆಲುಗು**

ಇದು ಆಂದ್ರಪ್ರದೇಶದ ರಾಜ್ಯ ಭಾಷೆ ಮತ್ತು ಆಡಳಿತ ಭಾಷೆ ಆಂದ್ರಪ್ರೇದಶದ ಸುತ್ತಮುತ್ತಲ ಪ್ರದೇಶಗಳಲ್ಲಿ ನಾಲ್ಕು ಕೋಟಿಗೂ ಹೆಚ್ಚು ಜನರು ತೆಲುಗು ಭಾಷೆಯನ್ನು ಮಾತೃಭಾಷೆಯನ್ನಾಗಿ ಆಡುತ್ತಿದ್ದಾರೆ. ಭಾರತದ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಸಾವಿರಾರು ಜನರು ತೆಲುಗು ಭಾಷೆಯನ್ನು ಆಡುವವರಿದ್ದಾರೆ. ದ್ರಾವಿಡ ಭಾಷೆಗಳಲ್ಲಿ ತೆಲುಗು ಭಾಷೆ ಕನ್ನಡ ಮತ್ತು ತಮಿಳು ಭಾಷೆಗಳನ್ನು ಬಿಟ್ಟರೆ ಮೂರನೇಯ ಪ್ರಾಚೀನ ದ್ರಾವಿಡ ಭಾಷೆಯಾಗಿ ಕಾಣಿಸಿಕೊಳ್ಳುತ್ತಾರೆ. ತೆಲಗು ಭಾಷೆ, ದ್ರಾವಿಡ ಭಾಷೆಗಳೆಲೆಲ್ಲಾ ಅದನ್ನು ಆಡುವವರ ಸಂಖ್ಯೆ ಮತ್ತು ಅದು ವ್ಯಾಪಿಸಿಕೊಂಡಿರುವ ಕ್ಷೇತ್ರದ ಭಾಷೆಗಳಲ್ಲಿ ಪ್ರಾಚೀನತೆಯ ದೃಷ್ಟಿಯಿಂದ ತಮಿಳು ಮೊದಲನೆಯ ಸ್ಥಾನವನ್ನು ಕನ್ನಡ ಎರಡನೆಯ ಸ್ಥಾನವನ್ನು ಪಡೆಯುತ್ತವೆ. ತೆಲುಗು ದ್ರಾವಿಡ ಭಾಷೆಗಳಲ್ಲಿ ಪ್ರಾಚೀನತೇಯ ದೃಷ್ಟಿಯಿಂದ ಮೂರನೇಯ ಸ್ಥಾನವನ್ನು ಅದನ್ನು ಆಡುವವರ ಸಂಖ್ಯೆ ದೃಷ್ಟಿಯಿಂದ ಮೊದಲನೆಯ ಸ್ಥಾನವನ್ನು ಪಡೆಯುತ್ತದೆ. ಎಂದು ಹೇಳಬಹುದು. ತೆಲುಗು ಭಾಷೆಯಲ್ಲಿ ಕ್ರಿ. ಶ 575 ರ ಕಳಮಳ್ಳ ಧನಂಜಯನ ಶಿಲಾಶಾಸನವೇ ಹೆಚ್ಚು ಪ್ರಾಚೀನ ವೆಂದು ಕೆಲವರು ಭಾವಿಸಿದರೆ, ಮತ್ತೆ ಕೆಲವರು ಕ್ರಿ.ಶ. 630 ರ ರೇಣುಕ ಹಟ್ಟ ಮತ್ತು ರಾಜಲು ಶಿಲಾಶಾಸನವೇ

ಹೆಚ್ಚು ಪ್ರಾಚೀನವೆಂದು ಭಾವಿಸಿದ್ದಾರೆ. ಇವುಗಳಿಗೆ ಹಿಂದೆ ಇದ್ದಿರಬಹುದಾದ ಯಾವ ತೆಲುಗು ಶಾಸನವೂ ದೊರೆತಿಲ್ಲ ಕೆಲವರು ತೆಲುಗು ಭಾಷೆಯ ಪ್ರಾಚೀನತೆಯನ್ನು ಕ್ರಿ.ಪೂ. 3000 ದಿಂದ 1500 ರವರೆಗೆ ಬಯ್ಯುವರು. ಇದಕ್ಕೆ ಖಚಿತವಾದ ಯಾವ ಆಧಾರಗಳು ದೊರೆಯುವುದಿಲ್ಲಾ. ತೆಲುಗು ಭಾಷೆಯ ಚರಿತ್ರೆಯು ಕ್ರಿ.ಶ. ಏಳನೇಯ ಶತಮಾನದಿಂದ ಆರಂಭವಾದರೆ ಇದರ ಸಾಹಿತ್ಯಾ ಚರಿತ್ರೆಯು ಕ್ರಿ.ಶ. 11ನೇ ಶತಮಾನದಿಂದ ಆರಂಭವಾಗುತ್ತದೆ. ಈ ದಿಸೆಯಲ್ಲಿ ವಿದ್ವಾಂಸರಲ್ಲಿ ಸಾಕಷ್ಟು ಮತ ಭೇದಗಳಿವೆ. ಕ್ರಿ.ಶ. 1150 ರಲ್ಲಿ ರಚಿತವಾದ ''ಆಂದ್ರ ಶಬ್ದ ಚಿಂತಾಮಣಿ'' ಎಂಬ ಗ್ರಂಥವೇ ತೆಲುಗು ಭಾಷೆಯಲ್ಲಿ ಹೆಚ್ಚು ಪ್ರಾಚೀನವೆಂದು ಕೆಲವರು ಭಾವಿಸಿದರೆ ಮತ್ತೆ ಕೆಲವರು ನನ್ನಯ ಭಟ್ಟನು ಮಹಾಭಾರತವೇ ಹೆಚ್ಚು ಪ್ರಾಚೀನ ವೆಂದು ಭಾವಿಸುವರು. ಇದಕ್ಕೂ ಹಿಂದೆ ಇಟ್ಟಿರಬಹುದಾದ ಯಾವ ಗ್ರಂಥಗಳು ತೆಲುಗಿನಲ್ಲಿ ದೊರೆಯುವುದಿಲ್ಲಾ ತೆಲುಗು ಭಾಷೆ ಮತ್ತು ಸಾಹಿತ್ಯಾದ ಪ್ರಾಚೀನತೆಯ ಬಗ್ಗೆ ತಿಳಿಸಬಲ್ಲಾ ಯಾವ ಖಚಿತವಾದ ಆಧಾರಗಳು ದೊರೆಯುವುದಿಲ್ಲಾ ಮಲೆಯಾಳಂ ರಾಜ್ಯವನ್ನು ಕೇರಳ ಎಂದು ಕರೆಯುವಂತೆ ತೆಲುಗು ರಾಜ್ಯವನ್ನು ಆಂಧ್ರ ಪ್ರದೇಶ ಎಂದು ಕರೆಯಲಾಗುತ್ತಿದ್ದಿತು ಎಂಬುದಕ್ಕೆ ಸಾಕಷ್ಟು ಆಧಾರಗಳು ದೊರೆಯುತ್ತವೆ. ತೆಲುಗು ಎಂಬ ಶಬ್ದಕ್ಕೆ ತೆನುಗು, ತೆನುಂಗು, ತೆಲುಗ, ತೆಲಗ, ತೆಲಿಂಗ, ತ್ರೈಲಿಂಗ , ತ್ರಿಲಿಂಗ, ತೆಲಿಗ, ಆಂಧ್ರ ಎಂಬ ಸಮನಾರ್ಥ ಶಬ್ದಗಳು ದೊರೆಯುತ್ತದೆ ಇವುಗಳಲ್ಲಿ ಆಂಧ್ರ ಎಂಬ ಸಂಸ್ಕೃತ ಶಬ್ದವೇ ಹೆಚ್ಚು ಪ್ರಾಚೀನವಾದದ್ದು ಇದು ಸಂಸ್ಕೃತದ ಬೇರೆ ಬೇರೆ ಪ್ರಾಚೀನ ಗ್ರಂಥಗಳಲ್ಲಿ ದೊರೆಯುತ್ತದೆ. ಆದರೆ ಇದು ಇತ್ತೀಚಿನ ಶಬ್ದವೆಂದು ಕೆಲವರು ಅಭಿಪ್ರಾಯ, ತೆಲುಗು ಎಂಬ ಶಬ್ದಕ್ಕೆ ತೆನುಗು ಎಂಬ ಶಬ್ದ ಬಳಕೆಯಾಗಿರುವುದನ್ನು ಅಲ್ಲಲ್ಲಿ ಕಾಣಬಹುದಾಗಿದೆ, ತ್ರಿಲಿಂಗ ಎಂಬ ರೂಪ ದಿಂದಲೇ, ತಿಲಿಂಗ, ತೈಲಿಂಗ, ತ್ರೈಲಿಂಗ, ತೆಲುಗು ಎಂಬುದು ವಿಕಾಸಗೊಂಡಿರಬಹುದೆಂದು ಕೆಲವರು ಭಾವಿಸಿದ್ದಾರೆ, ತೆಲಿಂಗ ಎಂಬುದಕ್ಕಿಂತಲೂ ತ್ರಿಲಿಂಗ ಎಂಬ ಶಬ್ದವೇ ಹೆಚ್ಚು ಪ್ರಾಚೀನವೆಂದು ಕೆಲವರ ಅಭಿಪ್ರಾಯ, ಆಂಧ್ರಪ್ರದೇಶವು ಕಾಳೇಶ್ವರಿ, ಶ್ರೀಶೈಲ ಮತ್ತು ಭೀಮೇಶ್ವರಿ ಎಂಬ ಮೂರು ಶಿವ ಕ್ಷೇತ್ರಗಳಿಂದ ಸುತ್ತುವರಿದ ಕ್ಷೇತ್ರವಾದುದರಿಂದ ಈ ತ್ರಿಲಿಂಗ ಎಂಬ ಶಬ್ದವು ಹೆಚ್ಚು ಬಳಕೆಗೆ ಬಂದಿರಬಹುದಾದ ಸಾಧ್ಯತೆಗಳಿವೆ ಎಂದು ಕೆಲವರ ಊಹೆ. ಈ ತೆಲುಗು ಎಂಬ ಶಬ್ದಕ್ಕೆ ಸಂವಾದಿಯಾಗಿ ದೊರೆಯುವ ಬೇರೆ ಬೇರೆ ಶಬ್ದಗಳು ಆ ಬೇರೆ ಬೇರೆ ಪ್ರಾಚೀನ ಸಾಹಿತ್ಯ ಗ್ರಂಥಗಳಲ್ಲಿ ದೇಶ, ಭಾಷೆ ಸಮಾಜ, ಸಂಸ್ಕೃತಿ, ಜನಾಂಗ, ಜಾತಿ ಮುಂತಾದ ಅರ್ಥದಲ್ಲಿ ಬಳಕೆಯಾಗಿರುವುದು ಕಂಡು ಬರುತ್ತದೆ. ಈ ಬೇರೆ ಬೇರೆ ಶಬ್ದಗಳಿಂದ ತೆಲುಗು ಎಂಬ ಶಬ್ದ ಹೇಗೆ ಬೆಳೆದು ಬಂದಿದೆ ಎಂಬುದರ ಬಗ್ಗೆ ಯಾವುದನ್ನು ಖಚಿತವಾಗಿ ಹೇಳು ಬರುವುದಿಲ್ಲಾ ತೆಲುಗು, ತೆನುಗು, ತೆನುಂಗು ಎಂಬ ಶಬ್ದಗಳು ದೇಶಿಯ ಶಬ್ದಗಳಾದರೆ ಆಂದ್ರ ಎಂಬ ಶಬ್ದವು ಅನ್ಯದೇಶಿಯ ಶಬ್ದವಾಗಿ ತೋರಿಬರುತ್ತದೆ. ತೆಲುಗಿನಲ್ಲಿ ಜೇನುತುಪ್ಪ ಎಂಬುದಕ್ಕೆ ತೇನ್ ಎಂಬ ಶಬ್ದ ಬಳಕೆಯಲ್ಲಿದೆ ಈ ತೇನ್ ಶಬ್ದದಿಂದಲೇ ತೆಲುಗು ಎಂಬ ಶಬ್ದ ಬೆಳೆದುಬಂದಿರಬಹುದೆಂದು ಊಹಿಸಲು ಅವಕಾಶಗಳಿವೆ, ತೆಲುಗು ಭಾಷೆ ಜೇನು ತುಪ್ಪದಷ್ಟೇ ಸುಮಧುರವಾದ ಭಾಷೆ ಆದರೆ ಇದರ ಉಗಮದ ಬಗ್ಗೆ ಯಾವುದನ್ನು ಖಚಿತವಾಗಿ ಹೇಳಲು ಬರುವುದಿಲ್ಲಾ ತಮಿಳು ಭಾಷೆಯನ್ನು ಆಗಸ್ತ್ಯ ಮಹಾಮುನಿಯು ರೂಪಿಸಿಕೊಂಡು ತಮಿಳರಿಗೆ ಕಲಿಸಿದವನೆಂದು ಕೆಲವರು ಅಭಿಪ್ರಾಯ ವ್ಯಕ್ತಪಡಿಸಿದರೆ, ತೆಲುಗು ಭಾಷೆಯನ್ನು ಕಣ್ವ ಮಹಾಮುನಿಯು ರೂಪಿಸಿಕೊಂಡು ತೆಲುಗರಿಗೆ ಕಲಿಸಿದನೆಂದು ಮತ್ತೆ ಕೆಲವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇದರ ಬಗ್ಗೆ ಯೂ

ಖಚಿತವಾದ ಯಾವ ಆಧಾರಗಳು ದೊರೆಯುವುದಿಲ್ಲಾ. ತೆಲುಗು ಭಾಷೆ ಕನ್ನಡ ಮತ್ತು ಮಲೆಯಾಳಂ ಭಾಷೆಗಳಂತೆ ಬಹಳ ಪ್ರಾಚೀನ ಕಾಲದಿಂದಲೂ ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳು ಪ್ರಭಾವಕ್ಕೆ ಒಳಗಾಗಿದೆ. ಇದರಿಂದಾಗಿ ಸಂಸ್ಕೃತ ಶಬ್ದಗಳು ತೆಲಗು ಭಾಷೆಗೆ ಹೋಗಿ ಸೇರಿವೆ ಸಂಸ್ಕೃತದ ವಿದ್ವಾಂಸರು ತೆಲುಗು ಭಾಷೆಯನ್ನು ಆಂದ್ರಭಾಷೆ ಎಂದು ಹೆಸರಿಸಿಕೊಂಡಿದ್ದಾರೆ. ಆಂಧ್ರ ಚಿಂತಾಮಣಿ ಇದಕ್ಕೆ ಸಾಕ್ಷಿಯಾಗಿದೆ. ಪೋರ್ಚುಗೀಸರು ತೆಲುಗು ಭಾಷೆಯನ್ನು ಗೆಂಟೊ ಎಂದು ಕರೆದುಕೊಂಡಿದ್ದಾರೆ.

ತೆಲಗು ಭಾಷೆ ಒಂದು ಕಡೆ ದಕ್ಷಿಣ ದ್ರಾವಿಡ ಭಾಷೆಗಳನ್ನು, ಇನ್ನೊಂದು ಕಡೆ ಮಧ್ಯ ದ್ರಾವಿಡ ಭಾಷೆಗಳನ್ನು ಹೋಲುತ್ತದೆ. ಮಧ್ಯ ದ್ರಾವಿಡ ಭಾಷೆಗಳು ಪ್ರಾಚೀನತೆಯನ್ನು ಗುರುತಿಸಿಕೊಳ್ಳಲು ಖಚಿತವಾದ ಯಾವ ಆದಾರಗಳು ದೊರೆಯುದಿಲ್ಲ. ಅವೆಲ್ಲವೂ ಆಡು ಭಾಷೆಗಳು ಬರಹದ ಭಾಷೆಗಳಲ್ಲ ತೆಲಗು ಭಾಷೆಯಲ್ಲಿ ಬಳಕೆಯಲ್ಲಿರುವ ಎಷ್ಟು ಅಪೂರ್ವ ಶಬ್ದಗಳನ್ನು ಮಧ್ಯದ್ರಾವಿಡ ಭಾಷೆಗಳ ಸಹಾಯದಿಂದ ಗುರುತಿಸಿಕೊಳ್ಳಬಹುದು. ಎಷ್ಟೇ ವ್ಯಾಕರಣಾಂಶಗಳು ಮಧ್ಯಾ ದ್ರಾವಿಡ ಭಾಷೆಗಳನ್ನು ಹೋಲುತ್ತವೆ. ಈ ಕಾರಣದಿಂದಲೇ ಕೇಲವರು ಭಾಷೆಯನ್ನು ಮಧ್ಯದ್ರಾವಿಡ ಭಾಷೆ ಎಂದು ಪರಿಗಣಿಸಿಕೊಂಡರು. ಮತ್ತೆ ಕೆಲವರು ತೆಲುಗಿನ ಧ್ವನಿ ವ್ಯವಸ್ಥೆಯನ್ನು ಗುರುತಿಸಿ ತೆಲುಗು ಭಾಷೆಯ ಧ್ವನಿಗಳು ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ಕಂಡು ಬರುವ ಧ್ವನಿ (ಮಾ) ಗಳನ್ನು ಹೆಚ್ಚು ಹೋಲುತ್ತವೆ. ಈ ಕಾರಣದಿಂದಲೇ ತೆಲುಗು ದಕ್ಷಿಣ ದ್ರಾವಿಡ ಭಾಷೆ ಎನ್ನಲು ಸಾಧ್ಯವಾಗಿದೆ. ತೆಲುಗಿನಲ್ಲಿ ಕಂಡುಬರುವ ಮಧ್ಯದ್ರಾವಿಡ ಅಂಶಗಳನ್ನು ಗಮನಿಸಿದ ಕೆಲವರು ತೆಲುಗು ಮೂಲ ಮಧ್ಯ ದ್ರಾವಿಡ ಭಾಷೆಯಿಂದ ಹುಟ್ಟಿ ಬೆಳೆದು ಬಂದಿರಬಹುದೆಂದು ಊಹಿಸಲು ಕಾರಣವಾಗಿದೆ ಇದೇ ರೀತಿ ತೆಲುಗಿನಲ್ಲಿ ಕಂಡುಬರುವ ದಕ್ಷಿಣ ದ್ರಾವಿಡಾಂಶಗಳನ್ನು ಗಮನಿಸಿದ ಮತ್ತೆ ಕೆಲವರು ತೆಲುಗು ಮೂಲ ದಕ್ಷಿಣ ದ್ರಾವಿಡ ಭಾಷೆಯಿಂದ ಹುಟ್ಟಿ ಬೆಳೆದು ಬಂದಿರಬಹುದೆಂದು ಊಹಿಸಿದ್ದಾರೆ. ಇನ್ನೂ ಕೆಲವರು ಇದು ಮೂಲ ದ್ರಾವಿಡ ಭಾಷೆಯಿಂದಲೇ ಹುಟ್ಟಿಬೆಳೆದು ಬಂದ ಭಾಷೆಯಾಗಿದೆ ಎನ್ನುವರು. ಇವುಗಳ ಬಗ್ಗೆ ಯಾವುದನ್ನು ಖಚಿತವಾಗಿ ಹೇಳಲು ಬರುವುದಿಲ್ಲಾ.

ತೆಲುಗು ಭಾಷೆಯಲ್ಲಿ ಸಾಹಿತ್ಯಿಕ ಮತ್ತು ವ್ಯವಹಾರಿಕ ಎಂಬ ಎರಡು ರೂಪಗಳಿವೆ. ಈ ಎರಡು ರೂಪಗಳಲ್ಲಿಯೂ ಸಾಕಷ್ಟು ವ್ಯತ್ಯಾಸ ಕಂಡು ಬರುತ್ತದೆ. ತೆಲುಗು ಭಾಷೆ ಬಹು ವಿಶಾಲವಾದ ಕ್ಷೇತ್ರದಲ್ಲಿ ವ್ಯಾಪಿಸಿಕೊಂಡಿರುವುದರಿಂದ ಅದನ್ನು ಹೆಚ್ಚು ಜನರು ಆಡುವ ಭಾಷೆಯಾದುದರಿಂದ ಇದರಲ್ಲಿ ಸಹಜವಾಗಿ ಅನೇಕ ಪ್ರಾದೇಶಿಕ ಹಾಗೂ ಸಾಮಾಜಿಕ ಉಪ ಭಾಷೆಗಳು ಕಾಣಿಸಿಕೊಳ್ಳುತ್ತವೆ. ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ತೆಲುಗು ಭಾಷೆಯಲ್ಲಿ ಸಾಕಷ್ಟು ವ್ಯತ್ಯಾಸವಿದೆ. ತೆಲಿಂಗಾಣ, ರಾಯಲ್‌ಸೀಮೆ, ಗೋದಾವರಿ, ಕೃಷ್ಣ, ನೆಲ್ಲೂರು, ಗುಂಟೂರು, ಹೈದರಾಬಾದ್ ಮುಂತಾದ ತೆಲುಗು ರೂಪಗಳು ಪ್ರಾದೇಶಿಕವಾಗಿ ಕಾಣಿಸಿಕೊಳ್ಳುತ್ತವೆ. ಇವುಗಳಲ್ಲಿಯೂ ಸಾಕಷ್ಟು ವ್ಯತ್ಯಾಸವಿದೆ, ತೆಲುಗು ಭಾಷೆಯಲ್ಲಿ ಸಾವರ, ವಡ್ಡ, ಗೊಲ್ಲರಿ, ದೊಂಬ, ಮನ್ನೆ, ಜೇರಡಿ, ಚಂಚು ಕೊಮ್ಮೊವು, ಯನದಿ ಮುಂತಾದ ಉಪ ಭಾಷೆಗಳು ದೊರೆಯುತ್ತದೆ, ಇವು ಹಳೆಯ ತೆಲುಗು ಭಾಷೆಯಿಂದ ಹುಟ್ಟಿ ಬೆಳೆದು ಬಂದ ರೂಪಗಳಿರಬಹುದೆಂದು ಕೆಲವರ ಅಭಿಪ್ರಾಯ. ಈ ಭಾಷೆ ಆಡುವವರು ಕರ್ನಾಟಕ, ತಮಿಳುನಾಡು, ಆಂದ್ರ ಪ್ರದೇಶ, ಬೇರೆ ಬೇರೆ ಭಾಗಗಳಲ್ಲಿ ವಾಸವಾಗಿದ್ದಾರೆ, ಇವು ತೆಲುಗು ಮತ್ತು ತಮಿಳು,

ತೆಲುಗು ಭಾಷೆಗಳಿಗಿಂತ ಕನ್ನಡ ಭಾಷೆಯನ್ನು ಹೆಚ್ಚು ಹೋಲುತ್ತವೆ. ತೆಲುಗು ಭಾಷೆಯಲ್ಲಿ ಕನ್ನಡ ಮತ್ತು ತಮಿಳು ಭಾಷೆಗಳ ಪ್ರಭಾವವೂ ಹೆಚ್ಚಾಗಿ ಕಂಡು ಬರುವುದು. ತೆಲುಗು ಭಾಷೆಯಲ್ಲಿ ತಮಿಳು ಭಾಷೆಗಿಂತ ಕನ್ನಡ ಭಾಷೆಯ ಅನೇಕ ಅಂಶಗಳು ಕಂಡುಬರುತ್ತವೆ. ಮುಸಲ್ಮಾನರ ಆಳ್ವಿಕೆಯ ಕಾಲದಲ್ಲಿ ಉರ್ದುಭಾಷೆಯ ಪ್ರಭಾವವೂ ಕೂಡ ಕಂಡುಬರುತ್ತದೆ. ಅನೇಕ ಇಷ್ಟಾದರೂ ತೆಲುಗು ಅನೇಕ ಮೂಲ ದ್ರಾವಿಡ ಅಂಶಗಳನ್ನು ಉಳಿಸಿಕೊಂಡಿರುವ ಭಾಷೆಯಾಗಿದೆ. ವರ್ಣ ವ್ಯತ್ಯಯ ಅಥವಾ ಅಕ್ಷರ ಪಲ್ಲಟ ತೆಲುಗು ಭಾಷೆಯಲ್ಲಿ ವಿಶಿಷ್ಟವಾದದ್ದು, ಇದು ಮಧ್ಯದ್ರಾವಿಡ ಭಾಷೆಗಳಾದ ಕುಯಿ, ಮತ್ತು ಕುವಿ ಭಾಷೆಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ತೆಲುಗು ಭಾಷೆಯ ಬೇರೆ ರೂಪಗಳಲ್ಲಿ ಉರಿಯಾ, ಹಿಂದಿ, ಮರಾಠಿ, ಮುಂತಾದ ಭಾಷೆಗಳ ಪ್ರಭಾವವು ಕಂಡು ಬರುತ್ತದೆ. ಕೆಲವು ಉಪ ಭಾಷೆಗಳು ತೆಲುಗು, ತಮಿಳು, ಕನ್ನಡ ಮತ್ತು ಉರಿಯ ಭಾಷೆಗಳ ಮಿಶ್ರಣವಾಗಿ ತೋರಿಬರುತ್ತವೆ. ಮಾರ್ಧ್ಯನ ಧ್ವನಿಗಳು. ದಂತ್ಯದ್ವನಿಗಳಾಗಿ ಪರಿವರ್ತನೆಗೊಳ್ಳಲು ಆ ಬೇರೆ ಆರ್ಯ ಭಾಷೆಗಳ ಪ್ರಭಾವ ಮುಖ್ಯ ಕಾರಣವೆಂದು ಕೆಲವರ ಅಭಿಪ್ರಾಯ, ಸವಾರ, ಮನ್ನೆ, ಜುರಯ್ ಭಾಷೆಗಳು ಇಂದು ಸ್ವತಂತ್ರ ಹಾಗೂ ಪ್ರತ್ಯೇಕ ದ್ರಾವಿಡ ಭಾಷೆಗಳಾಗಿ ಗೋಚರಿಸುತ್ತವೆ.

**2. ಜುರಯ್**

ಇದು ಒರಿಸ್ಸಾ ಮತ್ತು ಆಂಧ್ರ ಪ್ರದೇಶದ ಬೇರೆ ಬೇರೆ ಭಾಗಗಳಲ್ಲಿ ಏಳು ಸಾವಿರಕ್ಕೂ ಹೆಚ್ಚು ಜನರು ಆಡುತ್ತಿದ್ದಾರೆ. ಇದು ಸವಾರ ಅಥವಾ ಸವರ ಭಾಷೆಯ ಉಪ ಭಾಷೆ ಇರಬಹುದೆಂದು ಕೆಲವರ ಅಭಿಪ್ರಾಯ ಅರ್ಲೆಸ್‌ಯುದೆ ಎಂಬಾತನು ಜುರಯ್ ಭಾಷೆ ಸವುರ ಅಥವಾ ಸವಾರ ಭಾಷೆಯನ್ನು ಹೋಲುತ್ತದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾನೆ. ಇದು ಸ್ವತಂತ್ರ ಹಾಗೂ ಪ್ರತ್ಯೇಕವಾದ ದ್ರಾವಿಡ ಭಾಷೆ ಎಂದು ಹೆಚ್ಚು ಜನರ ಅಭಿಪ್ರಾಯ ಇದರಲ್ಲಿ ತೆಲುಗು ಮತ್ತು ಉರಿಯ ಭಾಷೆಗಳ ಪ್ರಭಾವವು ಕಂಡು ಬರುವುದು, ಇದರಲ್ಲಿ ತೆಲುಗು ಭಾಷೆಯ ಅನೇಕ ಅಂಶಗಳಿವೆ. ಈ ದಿಸೆಯಲ್ಲಿ ಆಳವಾದ ಸಂಶೋಧನೆ ನಡೆಯದ ಹೊರತು ಇದರ ಬಗ್ಗೆ ಯಾವುದನ್ನು ಖಚಿತವಾಗಿ ಹೇಳಲು ಬರುವುದಿಲ್ಲ.

**2) ಮಧ್ಯ ದ್ರಾವಿಡ ಭಾಷೆಗಳು**

ಇವುಗಳಲ್ಲಿ ಕೊಲಾಯಿ, ನಾಯ್ಕಿ, ಪರ್ಜಿ, ಗದಬ, ಗೋಂಡಿ, ಕೊಂಡ, ಕೊಯ, ಪೋಯ, ಮುಂಡ, ದೋರ್ಲ, ಕುವಿ, ಇಂದಿ ಮುಂತಾದ ಭಾಷೆಗಳು ಮುಖ್ಯವಾಗಿವೆ. ಇವು ಭಾರತದ ಮಧ್ಯಭಾಗದ ಬೇರೆ ಬೇರೆ ಕಡೆಗಳಲ್ಲಿ ಬಳಕೆಯಲ್ಲಿವೆ. ಭಾರತದದ ಮಧ್ಯಭಾಗದಲ್ಲಿ ಈ ಬೇರೆ ಬೇರೆ ಭಾಷೆಗಳು ಬಳಕೆಯಲ್ಲಿರುವುದರಿಂದ ಇವುಗಳನ್ನು ಭೌಗೋಳಿಕವಾಗಿ ಮಧ್ಯ ದ್ರಾವಿಡ ಭಾಷೆಗಳು ಎಂದು ಹೆಸರಿಸಿಕೊಳ್ಳಲಾಗಿದೆ. ಮಧ್ಯ ದ್ರಾವಿಡ ಭಾಷೆಗಳು ಯಾವುವು ಬರಹದ ಭಾಷೆಗಳಲ್ಲ. ಅವೆಲ್ಲವೂ ಲಿಪಿರಹಿತ ಭಾಷೆಗಳು. ಈ ಮಧ್ಯ ದ್ರಾವಿಡ ಭಾಷೆಗಳನ್ನು ಪರಸ್ಪರ ಹೋಲಿಸಿ ಪರಿಶೀಲಿಸಿದಾಗ ಅವುಗಳಲ್ಲಿ ಸಾಕಷ್ಟು ಸಾಮ್ಯ ಇರುವುದು ಕಂಡು ಬರುತ್ತದೆ. ಇವುಗಳಲ್ಲಿ ಕಂಡುಬರುವ ಸಾಮ್ಯವನ್ನು ಆಧರಿಸಿ ಮಧ್ಯದ್ರಾವಿಡ ಭಾಷೆಗಳನ್ನು ಕೊಲಾಮಿ ಪರ್ಜಿ ವರ್ಗ, ಗೊಂಡಿಕೊಂಡ ವರ್ಗ, ಕುಯಿ, ಕುವಿವರ್ಗ ಎಂದು ಮೂರು ಉಪವರ್ಗಗಳಲ್ಲಿ ವರ್ಗಿಕರಿಸಿಕೊಳ್ಳಲಾಗಿದೆ.

ಮೂಲ ಮಧ್ಯ ದ್ರಾವಿಡದಿಂದ ಮೊದಲು ಕೊಲಾಮಿ ಪರ್ಜಿವರ್ಗಕ್ಕೆ ಸೇರಿದ ಭಾಷೆಗಳು ವಿಕಾಸಗೊಂಡಿರಬಹುದೆಂದು ಕೆಲವರು ಊಹಿಸಿದರೆ ಮತ್ತೆ ಕೆಲವರು ಮೂಲ ಮಧ್ಯ ದ್ರಾವಿಡದಿಂದ ಮೊದಲುಗೋಂಡಿ, ಕೊಂಡ ಭಾಷೆಗಳು ವಿಕಾಸಗೊಂಡಿರಬಹುದೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇನ್ನೂ ಕೆಲವರು ಮೂಲ ಮಧ್ಯದ್ರಾವಿಡ ಭಾಷೆಯಿಂದ ಮೊದಲು ಕುಯಿ, ಕುವಿ, ಭಾಷೆಗಳು ಅನಂತರ ಕೊಲಾಯಿ, ಪರ್ಜಿಭಾಷೆಗಳು, ತದನಂತರ ಗೋಂಡಿಕೊಂಡ ಭಾಷೆಗಳು ವಿಕಾಸಗೊಂಡಿರಬಹುದೆಂದು ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ. ಈ ದಿಸೆಯಲ್ಲಿ ಯಾವುದನ್ನು ಖಚಿತವಾಗಿ ಹೇಳಲು ಬರುವುದಿಲ್ಲ. ಇದಕ್ಕೆ ಖಚಿತವಾದ ಯಾವ ಆಧಾರಗಳೂ ದೊರೆಯುವುದಿಲ್ಲ. ಇವುಗಳಲ್ಲಿ ಲಿಖಿತ ಯಾವ ಆಧಾರಗಳು ದೊರೆಯುವುದಿಲ್ಲ. ಇವುಗಳಲ್ಲಿ ಲಿಖಿತ ಯಾವ ಆಧಾರಗಳೂ ದೊರೆಯುವುದಿಲ್ಲ. ಇವುಗಳಲ್ಲಿ ಲಿಖಿತವಾಗಿ ಯಾವ ದಾಖಲೆಗಳು ದೊರೆಯವ ಕಾರಣ ಇವು ಮೂಲ ದ್ರಾವಿಡದಿಂದ ವಿಕಾಸಗೊಂಡ ಭಾಷೆಗಳೆ ಅಥವಾ ಮೂಲ ಮಧ್ಯ ದ್ರಾವಿಡದಿಂದ ವಿಕಾಸಗೊಂಡ ಭಾಷೆಗಳೇ ಎಂಬುದರ ಬಗ್ಗೆ ಯಾವುದನ್ನು ಖಚಿತವಾಗಿ ಹೇಳಲು ಬರುವುದಿಲ್ಲ.

**ಅ) ಕೊಲಾಮಿ ಪರ್ಜಿ ಭಾಷಾವರ್ಗ**

ಇದರಲ್ಲಿ ಕೊಲಾಮಿ, ನಾಯ್ಕಿ, ಪರ್ಜಿ. ಗದಬ, ಮುಂತಾದ ಭಾಷೆಗಳುಮುಖ್ಯವಾಗಿವೆ.ಕೊಲಾಮಿ ಭಾಷೆಯನ್ನು ಹೆಚ್ಚು ಹೋಲುತ್ತವೆ. ಇವುಗಳಲ್ಲಿ ಕೊಲಾಮಿ ಭಾಷೆಯೇ ಹೆಚ್ಚು ಪ್ರಾಚೀನವೆಂದು ಕೆಲವರ ಅಭಿಪ್ರಾಯ, ಇವು ಹಳೆಯ ಕೊಲಾಮಿ ಇಲ್ಲವೇ ಮೂಲ ಕೊಲಾಮಿ ಭಾಷೆಯಿಂದ ಹುಟ್ಟ ಬೆಳೆದು ಬಂದ ಭಾಷೆಗಳೆಂದು ಊಹಿಸಬಹುದಾಗಿದೆ. ಇವು ಸಾಕಷ್ಟು ಸಾಮ್ಯ ಹೊಂದಿರುವುದರಿಂದ ಇವುಗಳನ್ನು ಕೊಲಾಮಿ ಪರ್ಜಿ ಭಾಷಾ ವರ್ಗ ಎಂದು ಹೆಸರಿಸಕೊಳ್ಳಲಾಗಿದೆ.

**1)ಕೊಲಾಮಿ ಭಾಷೆ**

ದ್ರಾವಿಡ ಕುಟುಂಬದ ಈ ಭಾಷೆಯನ್ನು ಕುರಿತು ಎಂ.ಬಿ.ಮಿಯೋರವರು Kolami A Dravidian Language ಎಂಬ ಅಮೂಲ್ಯ ಕೃತಿಯನ್ನು ಸಿದ್ದಪಡಿಸಿದ್ದಾರೆ. ಈ ಕೃತಿಯಲ್ಲಿ ಕೊಲಾಮಿ ಭಾಷೆಯ ವ್ಯಾಕರಣ ರೂಪವನ್ನು ಕುರಿತು ವಿವೇಚಿಸಿದ್ದಾರೆ. ಕೊಲಾಮಿ ಭಾಷೆಯಲ್ಲಿ ಸಾಹಿತ್ಯ ಕೃತಿಗಳಲ್ಲಿ ಕೆಲವು ಹಾಡುಗಳು ಇವೆ. ಈ ಭಾಷೆಯೂ ನೆರೆ ಹೊರೆಯ ಬೇರೆ ಬೇರೆ ಪರಿವಾರದ ಭಾಷೆಗಳ ಪ್ರಭಾವಕ್ಕೆ ಒಳಗಾಗುತ್ತಿದೆ. ಸಂಖ್ಯಾವಾಚಿಗಳಲ್ಲಿ ಒಂದರಿಂದ ಐದರವರೆಗೂ ದ್ರಾವಿಡ ಪದಗಳೇ ಇವೆ. ಐದರ ಅನಂತರದ ದ್ರಾವಿಡದ ಅಂಶ ಅಳಿದುಹೋಗಿ ಆರ್ಯ ವರ್ಗದ ಪ್ರಭಾವ ಕಾಣುತ್ತದೆ. ಮನ್ನೆ ಮತ್ತು ನಾಯ್ಕಿ ಕೊಲಾಮಿ ಇವು ಇದರ ಉಪ ಭಾಷೆಗಳು. ಆಂದ್ರ ಪ್ರದೇಶದ ಆದಿಲಾಬಾದ್ ಜಿಲ್ಲೆಯ ಕಲಾಮಿ ಭಾಷೆಗೆ ಮನ್ನೆ ಎಂದು ಹೆಸರು.. ಇದನ್ನು ಆಡುವವರ ಸಂಖ್ಯೆ 4,682 ಕೋಲಾಯಿ ಗುಂಪಿಗೆ ಸೇರಿದ ಮನ್ನೆರುವಲು ಎಂಬ ಕೊಲಾಮಿನವರು ಆಡುವ ಭಾಷೆಯಾದುದರಿಂದ ಈ ಹೆಸರು. ಇನ್ನೋಂದು ಉಪಭಾಷೆಯಾದ ನಾಯ್ಕಿಕೊಲಾಮಿಯನ್ನು ದಾದ್ರ ಮತ್ತು ನಗರ ಹವೇಲಿ ಮುಂತಾದ ಸ್ಥಳಗಳ ಕೊಲಾಮಿಗಳು ಆಡುತ್ತಾರೆ.

**2. ಪರ್ಜಿ ಭಾಷೆ**

ಭಾರತದದ ಭಾಷೆಗಳ ಪರಿವೀಕ್ಷಣೆಯಲ್ಲಿ ಪರ್ಜಿ ಭಾಷೆಯ ಉಪ ಭಾಷೆಯಾದ ಬಸ್ತಾರಿ ಪರ್ಜಿಯ ಪರಿಚಯವಿದೆ. ಸ್ಪನ್‌ಕೋನೊ ಅದನ್ನು ಗೋಂಡಿ ಭಾಷೆಯ ಉಪಭಾಷೆ ಎಂದು ವರ್ಗೀಕರಿಸಿದರು. ಇದನ್ನು ಭಟ್ರ ಭಾಷೆಯೆಂದು ಕರೆಯುತ್ತಿದ್ದರು. 1963 ರಲ್ಲಿ ಗ್ಲಾಸ್ ಫರ್ಡ್ ಎಂಬಾತ ಈ ಜನಾಂಗದ ಜೀವನ ವಿವರವನ್ನು ಕೊಟ್ಟು ಮೇಲೆ ಪರ್ಜಿ ಭಾಷೆಯನ್ನು ಹಲ್ಬಿ ಭಾಷೆಯ ಉಪಭಾಷೆಯೆಂದು ಉಲ್ಲೇಖಿಸಿದ್ದರು. ಭಟ್ರ ಮತ್ತು ಪರ್ಜಿ ಎಂಬ ಎರಡು ಹೆಸರುಗಳನ್ನು ಪರ್ಯಾಯ ಪದಗಳಾಗಿ ಬಳಸಿದ್ದರು.

ಸ್ಟೀಫನ್ ಹಿಸ್ಲೋಪ್ ಎಂಬಾತ ಕೂಡ ಪರ್ಜಿ ಭಾಷೆಯನ್ನು ಭಟ್ರಿಯನ್ ಭಾಷೆಯಂದೇ ಕರೆದಿದ್ದಾರೆ. ಭಟ್ರಭಾಷೆ ಒರಿಯಾ ಭಾಷೆಯ ಒಂದು ಉಪ ಭಾಷೆಯೆಂದು ನಿರ್ದೇಶಿದರಲ್ಲದೆ ಪರ್ಜಿ ಎಂಬ ಭಾಷೆ ಬೇರೆ ಪರಿವಾರದ ಭಾಷೆಯ ಒಂದು ಉಪಭಾಷೆಯೆಂದು ವಿವರಿಸಿದರು. ಅನಂತರ 1916 ರಲ್ಲಿ ರಸೆಲ್ ಎಂಬಾತ ಬಸ್ತಾರಿನ ಪರ್ಜಾಗಳನ್ನು ಧರ್ಮ ಎಂದು ಕರೆದಿದ್ದಾರೆ. ಥರ್ಸ್‌ಟನ್ ಒರಿಸ್ಸಾ ಮತ್ತು ಮದರಾಸು ಸಂಸ್ಥಾನಗಳ ಎಲ್ಲೆಗಳಲ್ಲಾ ವಾಸಿಸುವ ಪರ್ಜಾಗಳನ್ನು ಪೊರೊಜರೆಂದು ಕರೆದಿದ್ದಾರೆ. ಪರ್ಜಿ ಮತ್ತು ಗೋಂಡಿ ಭಾಷೆಗಳನ್ನು ಪ್ರತ್ಯೇಕ ಭಾಷೆಗಳಾಗಿ ಪರಿಶೀಲಿಸಬೇಕೆಂದು ಮೊಟ್ಟ ಮೊದಲು ಬಾರಿಗೆ ಗ್ರಿಗ್ಸನ್ ಎಂಬಾತ ಸೂಚಿಸಿದನು ಥಾಮಸ್ ಬರೋ ಮತ್ತು ಸುಧಿಭೂಷಣ ಭಟ್ಟಚಾರ್ಯ ಪರ್ಜಿ ಭಾಷೆ ದ್ರಾವಿಡ ಪರಿವಾರಕ್ಕೆ ಸೇರಿದ ಸ್ವತಂತ್ರ ಭಾಷೆ ಎಂದು ಖಚಿತ ಪಡಿಸಿದರು.

**3. ನಾಯ್ಕಿ ಭಾಷೆ**

1950-1951 ರಲ್ಲಿ ಟಿ.ಬರೋ ರವರು ಭಾರತದಲ್ಲಿ ಸಂಚರಿಸಿದ ಕಾಲದಲ್ಲಿ ಕೆಲವು ಅಜ್ಞಾತ ದ್ರಾವಿಡ ಭಾಷೆಗಳು ವಿಚಾರದಲ್ಲಿ ಕೆಲಸ ನೆಡೆಸಿದರು. ಇಡೀ ಕಾಲದಲ್ಲಿ ಅವರು ಸುದಿಭೋಷಣ ಭಟ್ಟಾಚಾರ್ಯರ ಜೊತೆಯಲ್ಲಿ ನಾಯ್ಕಿ ಮತ್ತು ಗದಬ ಭಾಷೆಯ ಉಪ ಭಾಷೆಯಾದ ಆದಿರಾಬಾದಿನ ಗದಬ ಭಾಷೆಯ ಬಗೆಗೆ ಅನೇಕ ಉಪಯುಕ್ತ ವಿವರಗಳನ್ನು ಕಲೆಹಾಕಿದರು. ಆ ವಿವರಗಳನ್ನು ಪರ್ಜಿ ಭಾಷೆಯನ್ನು ಕುರಿತು ಬರೆದ ಪುಸ್ತಕದಲ್ಲಿ ಅಳವಡಿಸಿದರು. ನಾಯ್ಕಿ ಎಂಬುದೂ ದ್ರಾವಿಡ ಭಾಷೆ. ಇದು ಮಹರಾಷ್ಟ್ರದ ಛಾಂದಾ ಜಿಲ್ಲೆಯ ಸುತ್ತ ಪ್ರಚಾರದಲ್ಲಿದೆ. ಪೆಂಗು ಭಾಷೆಯಂತೆ ನಾಯ್ಕಿ ಭಾಷೆಯ ವಿಚಾರದಲ್ಲಿ ಹೆಚ್ಚಿನ ವಿವರಗಳು ನಮಗೆ ತಿಳಿಯದು.

ಟಿ.ಬರೂ ಮತ್ತು ಎಂ.ಬಿ.ಎಮಿನೊ ಅವರು ತಮ್ಮ ದ್ರಾವಿಡ ಭಾಷೆ ಜ್ಞಾನಕೋಶದ ಪ್ರಸ್ತಾವನೆಯಲ್ಲಿ ಪರಿಚಯಿಸಿದ್ದಾರೆ. ನಾಯ್ಕಿ, ಕೊಲಾಮಿ, ಗದಬ ಮತ್ತು ಒಲ್ಲಾರಿ ಈ ದ್ರಾವಿಡಭಾಷೆ, ಉಪ ಭಾಷೆಗಳಲ್ಲಿ ತಮ್ಮಲ್ಲಿ ಕಾಣುವ ಕೆಲವು ಸಾದೃಶ್ಯಗಳಿಂದಾಗಿ ಇವೇ ಒಂದು ಉಪಶಾಖೆಯಾಗಿ ಕಾಣುತ್ತದೆ. ನಾಯ್ಕಿ ಭಾಷೆ ಜಿ. ಎಂ. ಗ್ರಿಯರ್ಸನ್ನನಿಗಿಂತಲೂ ಈಚೆಗೆ ಬೆಳಕಿಗೆ ಬಂದ ಭಾಷೆ. ರಾಬರ್ಟ್ ಕಾಲ್ಡ್‌ವೆಲ್‌ನ ಕಾಲಕ್ಕೆ ಅಜ್ಞಾತವಾಗಿದ್ದ ಭಾಷೆ.

**4) ಗದಬ ಭಾಷೆ**

ಮುಂಡ ಭಾಷೆ ಪರಿವಾರಕ್ಕೆ ಸೇರಿದ ಗದಬ ಎಂಬ ಭಾಷೆಯೊಂದಲ್ಲದೆ ದ್ರಾವಿಡ ಭಾಷೆ ಕುಟುಂಬಕ್ಕೆ ಸೇರಿದ ಗದಬ

ಎಂಬ ಹೆಸರಿಸಿ ಮತ್ತೊಂದು ಭಾಷೆಯೂ ಭಾರತದಲ್ಲಿದೆ. ಗದಬ ಹಾಗೂ ಈ ಭಾಷೆಗೆ ಸೇರಿದ ಇತರ ಕೆಲವು ಉಪಭಾಷೆಗಳ ವಿಚಾರದಲ್ಲಿ ಮಾಹಿತಿ ಸಂಗ್ರಹಣ ಕಾರ್ಯ ನಡೆದಿದೆ.

ಒರಿಸ್ಸಾ ಸಂಸ್ಥಾನದ ಕೂರಾವುತ್ ಜಿಲ್ಲೆಯಲ್ಲಿ ದ್ರಾವಿಡ ಭಾಷೆಗಳು ವರ್ಗಕ್ಕೆ ಸೇರಿದ ಗದಬ ಭಾಷೆಯನ್ನು ಆಡುವ ಹೆಚ್ಚಿನ ಜನರಿದ್ದಾರೆ. ಆದರೆ ಗದಬ ಭಾಷೆ ಕೂರಾವುತ್ ಜಿಲ್ಲೆಗೆ ಮಾತ್ರ ಮೀಸಲಾಗಿರದೆ ಆಂದ್ರ ಪ್ರಾಂತ್ಯಕ್ಕೆ ಸೇರಿದ ಶ್ರೀ ಕಾಕುಳಂ ಜಿಲ್ಲೆಯಲ್ಲಿಯೂ ವಿಶಾಖ ಪಟ್ಟಣದ ಸಲೂರು ಎನ್ನುವಲ್ಲಿಯೂ ಪ್ರಚಾರದಲ್ಲದೆ ಈ ಭಾಷೆಯಲ್ಲಿ ನಾಲ್ಕೈದು ಉಪ ಭಾಷೆಗಳಿದೆ. ಕೊಂಡೇಕೋರ್ ಗದಬ ಹಾಗೂ ಗುತೋಬ್ ಗದಬ - ಇವುಗಳಿಗೆ ವಿಶೇಷ ಅಂತರವಿದೆ. ಇವಲ್ಲದೆ ಸಲೂರಿನ ಗದಬ, ಒಲ್ಲಾರಿ ಮತ್ತು ಆದಿಲಾಬಾದಿನ ಗದಬ - ಇವು ಮೂರು ಗದಬ ಭಾಷೆಯ ಮುಖ್ಯ ಉಪ ಭಾಷೆಗಳು.

**ಆ) ಗೋಂಡಿ ಕೊಂಡ ಭಾಷಾವರ್ಗ:-**

ಇದರಲ್ಲಿ ಗೋಂಡಿ, ಕೊಂಡ, ಪೆಂಗೂ, ಮಂಡ ,ದೋರ್ಲಿ ಪೊಯ ಕೊಯ ಮುಂತಾದ ಭಾಷೆಗಳ ಮುಖ್ಯವಾಗಿವೆ. ಇವುಗಳಲ್ಲಿ ಗೊಂಡ ಭಾಷೆಯೇ ಹೆಚ್ಚು ಪ್ರಾಚೀನವಾದದ್ದು ಇವು ಪರಸ್ಪರ ಸಾಮ್ಯ ಹೊಂದಿರುವುದರಿಂದ ಇವುಗಳನ್ನು ಗೋಂಡಿಕೊಂಡ ಭಾಷಾವರ್ಗ ಎಂದು ಹೆಸರಿಸಿಕೊಳ್ಳಲಾಗಿದೆ. ಇವು ಹಳೆಯ ಗೋಂಡಿ ಅಥವಾ ಮೂಲ ಗೋಂಡಿ ಭಾಷೆಯಿಂದ ಹುಟ್ಟಿ ಬೆಳೆದು ಬಂದಿರಬಹುದೆಂದು ಕೆಲವರು ಊಹಿಸಿದ್ದಾರೆ.

**1) ಗೋಂಡಿ**

ಮಹಾರಾಷ್ಟ್ರ. ಒರಿಸ್ಸಾ, ಮಧ್ಯಪ್ರದೇಶ, ಆಂಧ್ರ ರಾಜ್ಯಗಳಲ್ಲಿರುವ ಗೋಂಡ ಎಂದು ಕರೆಯಲ್ಪಡುವ ಬುಡಕಟ್ಟು ಜನಾಂಗದವರ ಭಾಷೆ ಗೋಂಡಿ, ಗೋಂಡಿ ಭಾಷೆಯ ಜನ ಮಧ್ಯಪ್ರದೇಶದಲ್ಲಿ ವಿಶಾಲವಾದ ಪ್ರದೇಶದ ವಿಂಧ್ಯ, ಸಾತರ ಪರ್ವತಗಳ ಮಧ್ಯಪ್ರದೇಶದಲ್ಲಿ ವಿಶಾಲವಾದ ಮಧ್ಯದಲ್ಲಿ ನೆಲೆಗೊಂಡಿದ್ದಾರೆ. 19 ನೇ ಶತಮಾನದಿಂದ ಬೇರೆ ಬೇರೆ ವಿದ್ವಾಂಸರು ಗೋಂಡಿ ಭಾಷೆಯನ್ನು ಕುರಿತು ಲೇಖನಗಳನ್ನು ಗ್ರಂಥಗಳನ್ನು ರಚಿಸಿದ್ದಾರೆ. ಗೋಂಡಿ ತೆಲುಗಿಗಿಂತ ತಮಿಳಿಗೆ ಹೆಚ್ಚು ಋಣಿಯಾಗಿದೆಯೆಂದೂ ಕಾಲ್ಡವೆಲ್ ಅವರು ಅಭಿಪ್ರಾಯ ಪಡುತ್ತಾರೆ. ಸುಮಾರು 20 ಲಕ್ಷ ಜನರ ಮಾತೃ ಭಾಷೆಯಾಗಿರುವ ಗೊಂಡಿ ಈವರಿಗೆ ಉಪಲಬ್ದವಾದ ಅಭಿವೃದ್ಧಿ ದ್ರಾವಿಡ ಭಾಷೆಗಳಲ್ಲಯೇ ಅತಿ ಹೆಚ್ಚು ಉಪ ಭಾಷೆಗಳನ್ನು ಹೊಂದಿರುವ ವಿಶಿಷ್ಟ ಭಾಷೆಯಾಗಿದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ದೊರ್ಲಾ ಕೊಯಮಡಿಯ, ಮರಿಯ ಹಾಗೂ ರಾಜಗೊಂಡಿ ಹಲವಾರು ಉಪ ಭಾಷೆಗಳ ಪರಸ್ಪರ ಸಂಬಂಧವನ್ನು ಗುರುತಿಸಿ ಮೂಲ ಗೊಂಡಿ ಭಾಷೆಯನ್ನು ಪುನರ್‌ರಚಿಸುವುದು ಕಷ್ಟದ ಕೆಲಸವಾಗಿದೆ. ಅದಕ್ಕೆ ಕಾರಣವೆಂದರೆ ಉಪಭಾಷೆಗಳ ಮೇಲೆ ಪರಭಾಷೆಗಳ ಪ್ರಭಾವ ಹಾಗೂ ಅವು ಅಲ್ಲಲ್ಲಿ ಚದುರಿದಂತೆ ಇರುವುದೇ ಆಗಿರಬೇಕು. ಬರೋ ಮತ್ತು ಭಟ್ಟಾಚಾರ್ಯ ಅವರು ಈ ನಿಟ್ಟಿನಲ್ಲಿ ಶ್ಲಾಘನೀಯವಾಗಿ ಪ್ರಯತ್ನಿಸಿದ್ದಾರೆ. ಅವರ ಪ್ರಯತ್ನಕ್ಕೆ ಕಳಸವಿಡುವಂತೆ ಸುಬ್ರಮಣ್ಯಂ ಪಿ. ಇ. ಎಸ್ ಅವರು ಗೊಂಡಿ ಭಾಷೆಯ ವರ್ಣನಾತ್ಮಕ ವ್ಯಾಕರಣಗಳನ್ನು ರಚಿಸಿದ್ದಾರೆ. ಕ್ರಿ.ಶ.1844 ರಲ್ಲಿ ಹೊಯ್‌ಸೆಯ ಎಂಬ ವಿದ್ವಾಂಸರಿಂದ ಗೊಂಡಿ ಮೊಟ್ಟಮೊದಲು

ಗುರುತಿಸಲ್ಪಟ್ಟಿದೆ. ಆಂಧ್ರದಡೆಯಿಂದ ಬಂದಿರಬಹುದಾದ ಅನೇಕ ಗುಂಡರು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ನೆಲಸಿದ್ದಾರೆ. ಆದರೆ ಅವರಿಗೆ ಸ್ಥಳೀಯ ಕನ್ನಡವನ್ನು ತಮ್ಮ ಭಾಷೆಯನ್ನಾಗಿಸಿಕೊಂಡಿದ್ದಾರೆ.

**2) ಕೊಯಾ ಭಾಷೆ**

ಕೊಯ ಎಂಬ ಹೆಸರಿನ ಭಾಷೆಯನ್ನು ಗೋಂಡಿ ಭಾಷೆಯ ಒಂದು ಉಪ ಭಾಷೆ ಎಂಬುದಾಗಿ ಭಾರತದ ಭಾಷೆಗಳು ಪರಿವೀಕ್ಷಣೆಯ ವಿವರಣೆಯಲ್ಲಿ ಸರ್‌ಜಾರ್ಜ್ ಎಬ್ರಾಹಾಯ್ ಗ್ರಿಯೆರ್ಸನ್ನರು ತಿಳಿಸಿದ್ದರು. ಗೊಂಡಿ ಭಾಷೆಗೆ ಸೇರಿದ ಉಪಭಾಷೆಗಳಲ್ಲಿ ಒಂದಾದ ಕುಯಿ ಎಂಬ ಹೆಸರಿನ ಉಪಭಾಷೆಗೆ ಕೊಯ ಎಂಬ ಹೆಸರೂ ಸೇರಿದೆ ಎಂದು ಅವರು ಭಾವಿಸಿದ್ದರು. ಇತ್ತೀಚಿನ ಅಭ್ಯಾಸದ ಫಲವಾಗಿ ಕೊಯ ಭಾಷೆಯನ್ನು ಬೇರೆಯಾಗಿದೆಯೇ ಪರಿಶೀಲಿಸುವ ಅಭಿಪ್ರಾಯ ವ್ಯಕ್ತವಾಗಿದೆ.

ಈ ಭಾಷೆ ಆಡುವ ಜನರು ಆಂದ್ರಪ್ರದೇಶದಲ್ಲಿ ವಾಸಿಸುವರು, ಸಹಜವಾಗಿಯೇ ಈ ಭಾಗದ ಕೋಯ ಭಾಷೆಯ ಮೇಲೆ ತೆಲುಗು ಭಾಷೆಯ ಪ್ರಭಾವ ಕಂಡು ಬರುತ್ತದೆ. ಉಳಿದ ಜನ ಕೊರಾಪುತ್ ಜಿಲ್ಲೆಯಲ್ಲಿದ್ದಾರೆ. ಕೊಯಭಾಷೆ ಮಧ್ಯ ದ್ರಾವಿಡ ಭಾಷೆಯ ಗುಂಪಿಗೆ ಆಳವುಡುತ್ತದೆ.

**3) ಪೆಂಗೂ ಭಾಷೆ**

ದ್ರಾವಿಡ ಭಾಷಾ ವಿಜ್ಞಾನಿಗಳಾದ ಟಿ.ಬರೋ ಮತ್ತು ಸುಧಿಭೂಷಣ ಭಟ್ಟಾಚಾಯರ್ಯ ಇವರು 1957 ಮತ್ತು 1958 ರ ಅವಧಿಯಲ್ಲಿ ನಡೆಸಿದ ಕ್ಷೇತ್ರಕಾರ್ಯದ ಫಲವಾಗಿ ಪೆಂಗೂಭಾಷೆ ಬಯಲಿಗೆ ಬಂದಿತು. ಪೆಂಗೂ ಎಂಬುದೂ ದ್ರಾವಿಡ ಗುಂಪಿಗೆ ಸೇರಿದ ಭಾಷೆಯಾಗಿದ್ದು ಈ ಹಿಂದೆ ಇದರ ಬಗೆಗೆ ಮಾಹಿತಿ ದೊರೆತಿರಲಿಲ್ಲ. ಪೆಂಗೂ ಭಾಷೆಯನ್ನು ಒರಿಸ್ಸಾ ಸಂಸ್ಥಾನದ ಕೊರಾಪುತ್ ಜಿಲ್ಲೆಯ ಉತ್ತರ ಭಾಗಕ್ಕೆ ಮತ್ತು ಕಲಹಂದಿ ಜಿಲ್ಲೆಯ ಗಡಿಗಳಲ್ಲಿ ಇರುವ ಜನರು ಆಡುತ್ತಾರೆ. ಈ ಶತಮಾನದ ಪ್ರಾರಂಭದ ದಶಕದಲ್ಲಿ ಭಾರತದ ಭಾಷೆಗಳ ಪರಿವೀಕ್ಷಣೆ ನಡೆಸಿದ ಭಾರತದ ಭಾಷೆಗಳ ಪರಿವೀಕ್ಷಣೆಗೆ ನಡೆಸಿದ ಜಿ. ಎ. ಗ್ರಿಯರ್ ಸನ್ ಅವರು ಪೆಂಗೂ ಭಾಷೆಯನ್ನು ಟಯಿ ಭಾಷೆಯೊಡನೆ ಸಮೀಕರಿಸಿದ್ದರು. ಪೆಂಗೂ ಭಾಷೆ ದ್ರಾವಿಡ ಭಾಷೆಗಳಾದ ಕುಈ ಮತ್ತು ಕುವಿ ಎಂಬ ಭಾಷೆಗಳ ಸಮೀಪವರ್ತಿಯಾಗಿದೆ.

**4) ಕೊಂಡ ಭಾಷೆ (ಕೊಬಿ)**

ಕೊಂಡ ಭಾಷೆಯ ವಿಷಯವಾಗಿ ತೀರ ಇತ್ತೀಚಿನವರೆಗೂ ಯಾವ ವಿವರವೂ ತಿಳಿದು ಬಂದಿರಲಿಲ್ಲ. 1951 ರ ವರೆಗಿನ ಯಾವ ವರದಿಗಳಲ್ಲೂ ಈ ಕೊಂಡ ಭಾಷೆಯ ವಿವರವಿಲ್ಲಾ. ಈ ಕೊಂಡ ಭಾಷೆಯನ್ನು ಸುಧಿಭೂಷಣ ಭಟ್ಟಚಾರ್ಯ ಎಂಬುವವರು 1955ರ ಸುಮಾರಿಗೆ ಪತ್ತೆ ಹಚ್ಚಿದರು ಅವರು ಕೊಂಡ ಭಾಷೆಯನ್ನು ಪರಿಶೀಲಿಸಿ, ಇದು ದ್ರಾವಿಡ ಪರಿವಾರಕ್ಕೆ ಸೇರಿದ ಮತ್ತೊಂದು ಭಾಷೆಯೆಂಬುದನ್ನು ನಿರ್ಧರಿಸಿದರಲ್ಲದೆ. ಕೊಂಡ ಭಾಷೆಯ ಕೆಲವು ವಿವರಗಳನ್ನು ನಿರೂಪಿಸಿದರು.

ಕೊಂಡ ಭಾಷೆ ಗೋಂಡಿ ಮತ್ತು ಕುಈ - ಕುವಿ ಭಾಷೆಗಳು ನಡುವೆ ನಿಲ್ಲುವ ಮತ್ತು ಅವರಡು ಭಾಷೆಗಳು ಮದ್ಯದ

ಭಾಂದವ್ಯವನ್ನು ಕೂಡಿಸುವ ಕೊಂಡಿಯಂತಿದೆ.

5) ಮಂಡ

ಒರಿಸ್ಸಾದ ಆಂಧ್ರಪ್ರದೇಶದ ಮಧ್ಯಪ್ರದೇಶಗಳ ರಾಜ್ಯಗಳ ಬೇರೆ ಬೇರೆ ಭಾಗಗಳಲ್ಲಿ ಹತ್ತು ಸಾವಿರಕ್ಕೂ ಹೆಚ್ಚು ಜನರು ಮಂಡ ಭಾಷೆ ಆಡುವವರಿದ್ದಾರೆ. ಇವರು ಬೆಟ್ಟಗುಡ್ಡಗಳಲ್ಲಿ ವಾಸಿಸುವ ಹಾಗೂ ಆದಿವಾಸಿ ಜನಾಂಗಕ್ಕೆ ಸೇರಿದವರಾಗಿದ್ದಾರೆ. 1962 ರಲ್ಲಿ ಟ.ಬರೋ ಮತ್ತು ಎಸ್.ಭಟ್ಟಾಚಾರ್ಯ ಇವರು ಇದನ್ನು ಮೊತ್ತ ಮೊದಲು ಗುರುತಿಸಿ ಇದು ಸ್ವತಂತ್ರ ಹಾಗೂ ಪ್ರತ್ಯೇಕವಾದ ದ್ರಾವಿಡ ಭಾಷೆ ಎಂದು ತಿಳಿಯಪಡಿಸಿದರು. ಮೆಂಡ ಭಾಷೆಯಲ್ಲಿ ತೆಲಗು ಉರಿಯ - ಹಿಂದಿ ಮುಂತಾದ ಭಾಷೆಗಳ ಪ್ರಭಾವವು ಕಂಡು ಬರುವುದು. ಇದು ಗೊಂಡಿ ಭಾಷೆಯನ್ನು ಹೆಚ್ಚು ಹೋಲುವುದು ಅದುದ್ದರಿಂದ ಇದು ಹಳೆಯ ಗೊಂಡಿ ಭಾಷೆಯಿಂದ ಹುಟ್ಟಿ ಬೆಳೆದುಬಂದಿರಬಹುದೆಂದು ಕೆಲವರು ಊಹಿಸಿದ್ದಾರೆ. ಇದರಲ್ಲಿ ಗೋಂಡಿ ಕೊಂಡ, ಕುವಿ ತೆಲಗು ಭಾಷೆಗಳ ಬೇರೆ ಬೇರೆ ಅಂಶಗಳಿರುವುದು ಕಂಡು ಬರುತ್ತವೆ.

6) ದೋರ್ಲಿ

ಆಂಧ್ರಪ್ರದೇಶದ ವಿಶಾಖ ಪಟ್ಟಣ ಒರಸ್ಸಾದ ಕೊರಪುತ್ ಜಿಲ್ಲೆ ಮಧ್ಯಪ್ರದೇಶದ ಬೇರೆ ಬೇರೆ ಕಡೆಗಳ ಬೆಟ್ಟಗುಡ್ಡಗಳಲ್ಲಿ ವಾಸಿಸುವ ಜನಾಂಗಕ್ಕೆ ಸೇರಿದ ಮುವತ್ತು ಸಾವಿರಕ್ಕೂ ಹೆಚ್ಚು ಜನರು ದೋರ್ಲಿ ಭಾಷೆಯನ್ನು ಆಡುವವರಿದ್ದಾರೆ. ಇವರನ್ನು ಕೆಲವರು ದೋಗ್ಲಗಳು, ದೊರ್ಲಗೋಂದಿಗಳು ಮುಂತಾದ ಹೆಸರುಗಳಿಂದ ಕರೆಯುತ್ತಾರೆ. 1964 ರಲ್ಲಿ ಟ.ಬರೋ ಮತ್ತು ಎಸ್.ಭಟ್ಟಾಚಾರ್ಯ ಅವರು ಮೊಟ್ಟ ಮೊದಲಿಗೆ ಗುರುತಿಸಿ ಇದು ಸ್ವತಂತ್ರ ಹಾಗೂ ಪ್ರತ್ಯೇಕವಾದ ದ್ರಾವಿಡ ಭಾಷೆ ಎಂದು ತಿಳಿಯ ಪಡಿಸಿದರು,ಉರಿಯ, ತೆಲುಗು, ಹಿಂದಿ. ಮುಂತಾದ ಭಾಷೆಗಳ ಪ್ರಭಾವವು ಕಂಡು ಬರುವುದು. ಇದರಲ್ಲಿ ತೆಲಗು, ಉರಿಯ, ಕುವಿ, ಕುಯಿ ಭಾಷೆಗಳ ಅನೇಕ ಅಂಶಗಳು ಇರುವುದು ಕಂಡುಬರುತ್ತವೆ.

ಇ) ಕುಯಿ ಮತ್ತು ಕುವಿ ಭಾಷಾವರ್ಗ

ಇದರಲ್ಲಿ ಕುಯಿ - ಕುವಿ ಮುಂತಾದ ಭಾಷೆಗಳು ಮುಖ್ಯವಾಗಿದೆ. ಇವುಗಳಲ್ಲಿ ಕುವಿ ಭಾಷೆ ಹೆಚ್ಚು ಪ್ರಾಚೀನವಾದದ್ದು. ಇವರು ಮೂಲತ: ಮೂಲ ಮಧ್ಯ ದ್ರಾವಿಡ ಭಾಷೆಗಳಿಂದ ಹುಟ್ಟಿ ಬೆಳೆದು ಬಂದಿದೆ. ಕುಯಿ ಮತ್ತು ಕುವಿ ಭಾಷೆಗಳಲ್ಲಿ ಸಾಕಷ್ಟು ಸೌಮ್ಯವಿದೆ. ಆದ್ದರಿಂದಲೇ ಕುಯಿ ಭಾಷೆಯಿಂದ ಹುಟ್ಟಿ ಬೆಳೆದು ಬಂದಿರಬಹುದೆಂದು ಕೆಲವರು ಊಹಿಸಿದ್ದಾರೆ.

1) ಇಂದಿ:-

ಒರಿಸ್ಸಾದ ಕೊರ ಪುತ್ ಜಿಲ್ಲೆಯ ಕಾಶಿಪುರಂ, ಕಾಲ ಹಂದಿಯ ಗೋಪಾಲಪುರ ಮುಂತಾದ ಕಡೆಗಳಲ್ಲಿ ಹತ್ತು ಸಾವಿರಕ್ಕೂ ಹೆಚ್ಚು ಜನರು ಇಂದಿ ಭಾಷೆ ಆಡುವವರಿದ್ದಾರೆ. ಇದು ಕುಯಿ ಭಾಷೆಯನ್ನು ಹೆಚ್ಚು ಹೋಲುವುದು. ಆದ್ದರಿಂದಲೇ

ಕೆಲವರು ಇದು ಹಳೆಯ ಕುಯಿ ಭಾಷೆಯಿಂದ ಹುಟ್ಟಿ ಬೆಳೆದು ಬಂದಿರಬಹುದೆಂದು ಊಹಿಸಿದ್ದಾರೆ. ಇದರಲ್ಲಿ ತೆಲುಗು ಭಾಷೆಯ ಅನೇಕ ಅಂಶಗಳಿರುವುದು ಕಂಡು ಬರುತ್ತವೆ. 1979 ರಲ್ಲಿ ರಾಮಕೃಷ್ಣರೆಡ್ಡಿ ಎಂಬಾತನು ಈ ಭಾಷೆಯನ್ನು ಮೊತ್ತ ಮೊದಲಿಗೆ ಗುರುತಿಸಿ ಇದು ಸ್ವತಂತ್ರ ಹಾಗೂ ಪ್ರತ್ಯೇಕವಾದ ದ್ರಾವಿಡ ಭಾಷೆ ಎಂದು ತಿಳಿಯಪಡಿಸಿದನು. ಇದರಲ್ಲಿ ಉರಿಯ ಮತ್ತು ತೆಲುಗು ಭಾಷೆಗಳ ಪ್ರಭಾವವು ಕಂಡುಬರುವುದು. ಈ ಭಾಷೆಯನ್ನು ಅನೆ ಎಂತಲೂ ಕರೆಯುವರು. ಈ ದಿಸೆಯಲ್ಲಿ ಆಳವಾದ ಸಂಶೋಧನಾ ಕಾರ್ಯ ನಡೆಯದ ಹೊರತು ಈ ಭಾಷೆಯ ವಿಚಾರವಾಗಿ ಯಾವುದನ್ನು ಖಚಿತವಾಗಿ ಹೇಳಲು ಬರುವುದಿಲ್ಲ.

**2) ಕುಯಿ ಭಾಷೆ**

ಕುಯಿ ಭಾಷೆಯ ವ್ಯಾಕರಣ ಹಾಗೂ ಗದ್ಯಗಳನ್ನು ಕುರಿತು ತಕ್ಕ ಮಟ್ಟನ ಕೆಲಸ ಈ ಶತಮಾನದ ಆದಿಯ ಒಂದೆರೆಡು ದಶಕಗಳಲ್ಲೇ ನಡೆಯಿತು. ಇವುಗಳಲ್ಲಿ ವಿನ್‌ಫೀಲ್ಡ್ ಅವರು ಸಿದ್ಧಪಡಿಸಿರುವ ಕುಈ ಭಾಷೆಯ ವ್ಯಾಕರಣ ಗಮನಾರ್ಹ ಕೃತಿಯಾಗಿದೆ.ಅವರು ಈ ಭಾಷೆಯ ಪದಸಂಪತ್ತನ್ನು ಪಟ್ಟಿ ಮಾಡಿಕೊಟ್ಟಿದ್ದಾರೆ. ಈ ವೇಳಗಾಗಲೇ ಲಿಂಗುಮ್ ಲೆಚ್ಚಜೀ ಮತ್ತು ಫ್ರೆಂಡ್ ಪೆರ್ರೈರ ಎಂಬಿಬ್ಬರಲ್ಲದೆ ಇನ್ನೂ ಇತರ ವಿದ್ವಾಂಸರು ಪ್ರಾರಂಭದ ಕೃಷಿ ಮಾಡಿದ್ದರು. ಕುಯಿ ಭಾಷೆ ಮೂಲ ದ್ರಾವಿಡದಿಂದ ಸ್ವತಂತ್ರವಾಗಿ ಒಡೆದು ನಿಂತ ಭಾಷೆಯೆಂದು ವಿದ್ವಾಂಸರ ಅಭಿಪ್ರಾಯ.

ಕುಯಿ ಭಾಷೆಯನ್ನು ಆಡುವ ಕುಯಿಂಗರನ್ನು ಕುಈ, ಕುವಿ, ಕಂದಾ, ಕಂದಿ, ಗೊಂದ್, ಖೊಂಡ್, ಖೊಂಡಿ, ಖೊಂದ್, ಕೋಡು ಎಂದು ಕರೆಯಲಾಗಿದೆ. ಕೊಂಡ್ ಜನಾಂಗವೆಂಬುದನ್ನು ಒಪ್ಪಿಕೊಂಡರೆ ಅದರ ನಿಷ್ಪತ್ತಿಯನ್ನು (ತೆಲುಗು) ಕೊಂಡ (ಬೆಟ್ಟ) ಗಳಲ್ಲಿ ವಾಸಿಸುವವರೇ ಕೊಂಡರೆಂದು ಹೇಳಬಹುದು. ತು ಈಂಗರು ಆಡುವ ಕುಈ ಭಾಷೆಯನ್ನು ಗೊಂಡಿ, ತುಳು, ಒರಾಂವೋಭಾಷೆಗಳ ಗುಂಪಿನಲ್ಲಿ ಸೇರಿಸಬಹುದು. ಕುಈ ಭಾಷೆ ವ್ಯಾಕರಣದ ಹಾಗೂ ಪದ ಸಂಪತ್ತಿನ ದೃಷ್ಟಿಯಿಂದ ಕನ್ನಡ, ತೆಲುಗು, ತಮಿಳು, ಭಾಷೆಗಳೊಡನೆ ಹೋಲುತ್ತದೆಯಾದರೂ ತೆಲುಗೆ ಭಾಷೆಗೆ ಸಮೀಪವಾಗಿದೆ.

ಕುಯಿ ಭಾಷೆಗೆ ಲಿಪಿ ಇಲ್ಲವಾಗಿ ಇದರ ಸಾಹಿತ್ಯವೂ ಅಷ್ಟಾಗಿ ಇಲ್ಲ. ತೆಲುಗೆ ಲಿಪಿಯನ್ನು ಹೆಚ್ಚಾಗಿ ಬಳಸುತ್ತಿದ್ದರು. ಈಗ ಒರಿಯಾ ಭಾಷೆಯ ಲಿಪಿಯೇ ಬಹುಮಟ್ಟಿಗೆ ರೂಢಿಯಲ್ಲಿದೆ. ರೋಮನ್ ಲಿಪಿಯ ಪ್ರಚಾರದಲ್ಲಿದೆ. ಇತ್ತೀಚಿಗೆ ಈ ಭಾಷೆಯಲ್ಲಿ ಕೆಲವು ಪುಸ್ತಕಗಳು ಹೊರಬರುತ್ತಿವೆ. ಬೈಬಲ್ಲಿನ ಒಡಂಬಡಿಕೆಗಳು ಈ ಭಾಷೆಗೂ ಅನುವಾದವಾಗಿವೆ. ಈ ಭಾಷೆಯನ್ನು ರೆವರೆಂಡ್ ಕಾಲ್ಡ್‌ವೆಲ್ ಕು ಭಾಷೆ ಎಂದು ಕರೆದ. ಸರ್ ಜಾರ್ಜ್‌ಗ್ರಿಯರ್ ಸನ್‌ಕುಈ ಭಾಷೆಯನ್ನು ಖೊಂಡ್ ಭಾಷೆಯ ಜೊತೆ ಸೇರಿಸಿದ. ಆದರೆ ಆಧುನಿಕ ವಿದ್ವಾಂಸರ ಅಭಿಪ್ರಾಯದ ಅನುಸಾರವಾಗಿ ಕುಈ ಒಂದು ಪ್ರತ್ಯೇಕ ಭಾಷೆಯಾಗಿ ಪರಿಗಣಿಸಲು ಆರ್ಹವಾಗಿದೆ.

**3) ಕುವಿ ಭಾಷೆ**

ಕುವಿ ಭಾಷೆ ಒರಿಯಾ ಮತ್ತು ತೆಲುಗು ಭಾಷೆಗಳ ಗಡಿಯ ನಡುವೆ ದ್ವಿಮುಖಿಯಾದ ಪ್ರಭಾವಕ್ಕೆ ಒಳಗಾಗಿ ಬಾಳುತ್ತಿದೆ. ಕುವಿ ಭಾಷೆ, ಕುಈ ಭಾಷೆಯ ಸಮೀಪದ ಭಾಷೆ, ಬಹುಕಾಲದವರೆಗೂ ಈ ಎರಡು ಭಾಷೆಗಳನ್ನು ಒಂದೇ ಭಾಷೆಯಾಗಿ ಭಾಷೆ

ವಿಜ್ಞಾನಿಗಳು ಪರಿಗಣಿಸುತ್ತಿದ್ದರು. ಈಗ ಕುವಿಭಾಷೆ ಕುಈ ಭಾಷೆಯ ಉಪ ಭಾಷೆಯಾಗಿ ಪರಿಗಣಿಸಲಾಗಿದೆ. ಇದು ಪ್ರತ್ಯೇಕ ದ್ರಾವಿಡ ಭಾಷೆಯಾಗಿದೆ. ಧ್ವನಿ ವ್ಯವಸ್ಥೆ, ಪದ ಸಂಪತ್ತು ಹಾಗೂ ವ್ಯಾಕರಣಗಳ ವಿವರಣೆಯಲ್ಲಿ ಕುವಿ ಭಾಷೆ ಕುಈ ಭಾಷೆಯನ್ನು ಬಹುಮಟ್ಟಿಗೆ ಹೋಲುತ್ತದೆ. ಅಲ್ಲದೆ ಇವನ್ನು ಆಡುವ ಜನಾಂಗ ಒಂದೇ ಆಗಿ ಕಾಣುತ್ತಾರೆ. ಕುವಿ ಭಾಷೆಯ ಅಧ್ಯಯನ ಶತಮಾನದ ಆರಂಭದಿಂದಲೂ ನಡೆದಿದೆ.

## 3. ಉತ್ತರ ದ್ರಾವಿಡ ಭಾಷೆಗಳು

ಇವುಗಳಲ್ಲಿ ಕುರುಖ್, ಮಲ್ತೋ,ಭಾಲಗರ ಮುಂತಾದ ಭಾಷೆಗಳು ಮುಖ್ಯವಾಗಿವೆ. ಭಾರತದ ಉತ್ತರ ಭಾಗದಲ್ಲಿ ಬಳಕೆಯಲ್ಲಿರುವ ಭಾಷೆಗಳನ್ನೇ ಉತ್ತರ ದ್ರಾವಿಡ ಭಾಷೆಗಳು ಎಂದು ಕರೆಯುವರು. ಈ ಭಾಷೆಗಳನ್ನು ಪರಸ್ಪರ ಹೋಲಿಸಿ ಪರಿಶೀಲಿಸಿದಾಗ ಅವುಗಳಲ್ಲಿ ಸಾಕಷ್ಟು ಸಾಮ್ಯ ಇರುವುದು ಕಂಡುಬರುತ್ತದೆ. ಇವರು ಮೂಲತ: ಮೂಲ ಉತ್ತರ ದ್ರಾವಿಡ ಭಾಷೆಯಿಂದ ಹುಟ್ಟಿ ಬೆಳೆದು ಬಂದ ಭಾಷೆಗಳೆಂದು ಕೆಲವರ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಈ ದಿಸೆಯಲ್ಲಿ ಯಾವುದನ್ನು ಖಚಿತವಾಗಿ ಹೇಳಲು ಬರುವುದಿಲ್ಲ. ಇದಕ್ಕೆ ಖಚಿತವಾದ ಯಾವ ಆಧಾರಗಳು ದೊರೆಯುವುದಿಲ್ಲ. ಈ ಭಾಷೆಗಳನ್ನು ಅವುಗಳ ಆಂತರೀಕ ಸಂಬಂಧವನ್ನು ಆಧರಿಸಿ ಕುರುಖ್ ಮಲ್ತೋ ಭಾಷಾವರ್ಗ ಮತ್ತು ಬ್ರಾಹೂಈ ಭಾಷಾವರ್ಗ ಎಂದು ಎರಡು ವರ್ಗದಲ್ಲಿ ವರ್ಗೀಕರಿಸಿಕೊಳ್ಳಲಾಗುತ್ತದೆ. ಈ ವರ್ಗಕ್ಕೆ ಸೇರಿದ ಯಾವ ಭಾಷೆಗಳೂ ಬರಹದ ಭಾಷೆಗಳಲ್ಲ. ಇವು ಆಡುಭಾಷೆಗಳು ಮೂಲ ಉತ್ತರ ದ್ರಾವಿಡ ಭಾಷೆಯಿಂದ ಮೊತ್ತ ಮೊದಲು ಕುರಾಖ್ ಭಾಷೆಯೂ ಅನಂತರ ಬ್ರಾಹೂಈ ಭಾಷೆಯೂ ತದನಂತರ ಮಲ್ತೋ ಭಾಷೆಯು ಹುಟ್ಟು ಬೆಳೆದು ಬಂದಿರಬಹುದೆಂದು ಕೆಲವರು ಊಹಿಸಿದ್ದಾರೆ. ತುಳು, ಕೊರಗ,ತೊದ ಮತ್ತು ಕನ್ನಡ ಭಾಷೆಗಳ ಅನೇಕ ಅಂಶಗಳ ಉತ್ತರದ್ರಾವಿಡ ಭಾಷೆಗಳಲ್ಲಿ ದೊರೆಯುತ್ತವೆ. ಇವು ತಮ್ಮದೇ ಆದ ಕೆಲವು ಅಂಶಗಳನ್ನು ಉಳಿಸಿ ಕೊಂಡು ಬಂದಿವೆ. ಇವುಗಳಲ್ಲಿ ಅನೇಕ ಮೂಲ ದ್ರಾವಿಡ ಅಂಶಗಳು ಇರುವುದು ಕಂಡು ಬರುತ್ತವೆ.

### ಅ) ಕುರುಖ್ ಮಲ್ತೋ ಭಾಷಾ ವರ್ಗ

ಇದರಲ್ಲಿ ಕುರುಖ್ ಮಲ್ತೋ ಮಲೊ, ಧಾಂಗರ್ ಮುಂತಾದ ಭಾಷೆಗಳು ಸೇರುತ್ತವೆ. ಇವುಗಳಲ್ಲಿ ಆಂತರೀಕವಾಗಿ ಸಾಕಷ್ಟು ಸಾಮ್ಯ ಕಂಡು ಬರುವುದರಿಂದ ಇವನ್ನು ಒಂದೇ ವರ್ಗಕ್ಕೆ ಸೇರಿದ ಬಾಷೆಗಳು ಎಂದು ಪರಿಗಣಿಸಿಕೊಳ್ಳಬಹುದಾಗಿದೆ. ಇವುಗಳಲ್ಲಿ ಕುರುಖ್ ಭಾಷೆ ಹೆಚ್ಚು ಪ್ರಾಚೀನವಾದದ್ದು. ಇವರು ಮೂಲತ: ಹಳೆಯ ಕುರುಖ್ ಭಾಷೆಯಿಂದ ಹುಟ್ಟಿಬೆಳೆದು ಬಂದಿರಬಹುದೆಂದು ಕೆಲವರು ಭಾವಿಸಿದರೆ, ಮತ್ತೆ ಕೆಲವರು ಇವು ಮೂಲ ಉತ್ತರ ದ್ರಾವಿಡ ಭಾಷೆಯಿಂದ ಹುಟ್ಟಿ ಬೇರೆ ಬೇರೆಯಾಗಿ ಬೆಳೆದು ಬಂದ ಭಾಷೆಗಳಾಗಿವೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

#### 1) ಕುರುಖ್

ಮಧ್ಯ ಪ್ರದೇಶದ ಛೋಟಾನಾಗಪುರ, ಬಿಹಾರ, ಒರಿಸ್ಸಾ ರಾಜ್ಯಗಳ ರಾಜಮಹಲಿ ಬೆಟ್ಟ, ಪಶ್ಚಿಮ ಬಂಗಾಳದ

ಗುಡ್ಡಗಾಡು ಪ್ರದೇಶ ಅಸ್ಸಾಂನ ಟೀ ತೋಟ ಪ್ರದೇಶದ ಮುಂತಾದ ಕಡೆಗಳಲ್ಲಿ ವಾಸಿಸುವ ಆದಿವಾಸಿ ಜನಾಂಗಕ್ಕೆ ಸೇರಿದ ಹನ್ನೆರಡು ಲಕ್ಷಕ್ಕೂ ಹೆಚ್ಚು ಜನರು ಕುರುಖ್ ಭಾಷೆಯನ್ನು ಆಡುವವರಿದ್ದಾರೆ. ಇವರನ್ನು ಕೆಲವರು ಕುಡುಬರು, ಬರ್ಹ್ವಾನರು ಎಂತಲೂ ಕರೆಯುವರು. ಇದರಲ್ಲಿ ಹಿಂದಿ, ಅಸ್ಸಾಮಿ, ಉರಿಯ ಮತ್ತು ಬಂಗಾಳಿ ಭಾಷೆಗಳ ಪ್ರಭಾವವು ಕಂಡು ಬರುತ್ತದೆ. ಕುರುಖ್ ಭಾಷೆಯನ್ನು ಕಾಲ್ಡ್‌ವೆಲ್ ಮತ್ತು ಗ್ರಿಗ್ನಾರ್ಡ್ ಮುಂತಾದವರು, ಒರಾನ ಅಥವಾ ಒರ್ಹ್ವಾಸ್ ಎಂದು ಕರೆದಿದ್ದಾರೆ. ಕುರುಖ್ ಭಾಷೆ ಉತ್ತರ ದ್ರಾವಿಡ ಭಾಷೆಗಳಲ್ಲಿ ಹೆಚ್ಚು ಪ್ರಾಚೀನವಾದ್ದು. ಇದು ಬಹು ವಿಶಾಲವಾದ ಪ್ರದೇಶದಲ್ಲಿ ಬಳಕೆಯಲ್ಲಿದೆ. ಇದರಲ್ಲಿ ಸಹಜವಾಗಿ ಅನೇಕ ಪ್ರಾದೇಶಿಕ ರೂಪಗಳಿವೆ. ಅವುಗಳಲ್ಲಿ ಧಂಗಲಿ , ಧನ್ವರಿ, ನಾಗೇಶಿಯ, ಕಿಸಾನ್ ಕುರುಖ್ ಮುಂತಾದವು ಮುಖ್ಯವಾಗಿವೆ. ಧಾಂಗರ ಎಂಬುದು ಕುರುಖ್ ಭಾಷೆ ಬಹು ಮುಖ್ಯವಾದ ಉಪಭಾಷೆ ಎಂದು ಕೆಲವರ ಅಭಿಪ್ರಾಯ.ಕುರುಖ್ ಭಾಷೆಯ ಮೂಲದ ವಿಚಾರವಾಗಿ ಖಚಿತವಾಗಿ ಯಾವುದನ್ನು ಹೇಳಲು ಬರುವುದಿಲ್ಲ. ಇದಕ್ಕೆ ಖಚಿತವಾದ ಯಾವ ಆಧಾರಗಳು ದೊರೆಯುವುದಿಲ್ಲ. ಕರುಬ್ ಭಾಷೆ ಮೂಲ ದ್ರಾವಿಡ ಇಲ್ಲವೇ ಮೂಲ ಉತ್ತರ ದ್ರಾವಿಡ ಭಾಷೆಯಿಂದ ಹುಟ್ಟಿ ಬೆಳೆದು ಬಂದಿರಬಹುದೆಂದು ಕೆಲವರ ಅಭಿಪ್ರಾಯ. ಕುರುಖ್ ಭಾಷೆಯಲ್ಲಿ ಮೂಲ ದ್ರಾವಿಡ ''ಕ '' ಕಾರವು ''ಕಾ'' ಆಗಿ ಪರಿವರ್ತನೆಯಾಗುತ್ತದೆ. ಇದೇ ರೀತಿನ ಕಾರ ''ಬ'' ಕಾರವಾಗಿಯು ''ಣ'' ಕಾರಣ ಕಾರವಾಗಿಯೂ ''ಳ'' ಕಾರ ''ಉ'' ಕಾರವಾಗಿಯೂ ಪರಿವರ್ತನೆಯಾಗುವುದನ್ನು ಕಾಣಬಹುದು. ಉತ್ತಮ ಪುರುಷ. ಸರ್ವನಾಮ ಬಹುವಚನ ರೂಪಗಳಲ್ಲಿ ಸಮಾವೇಶಕ ಮತ್ತು ಅಸಮವೇಶಕ ಎಂಬ ಬಹುವಚನ ಭೇದ ಇದರಲ್ಲಿ ಕಂಡು ಬರುತ್ತದೆ. ಕನ್ನಡ, ತುಳು, ಕೊರಗ, ತೊದ ಭಾಷೆಗಳ ಅನೇಕ ಅಂಶಗಳು ಕುರುಖ್ ಭಾಷೆಗಳಲ್ಲಿ ದೊರೆಯುತ್ತವೆ.

**2) ಮಲ್ತೋ ಭಾಷೆ**

ಮಲ್ತೋ ಭಾಷೆಯನ್ನು ಆಡುವ ಆದಿವಾಸಿ ಜನಾಂಗದವರು ಈಗ ರಾಜಮಹಲ್ ಪರ್ವತ ಪಂಕ್ತಿಯ ಸುಮಾರು 65-70 ಮೈಲಿಗಳ ಉದ್ದಕ್ಕೆ ಇದ್ದಾರೆ. ಮಲ್ತೋ ಭಾಷೆಗೆ ಸೌರಿಯಾ ಭಾಷೆ ಎಂಬ ಇನ್ನೊಂದು ಹೆಸರಿದೆ. ಮಲ್ತೋ ಭಾಷೆಯನ್ನಾಡುವ ಜನರು ಸಾಹಸಿಗಳು. ಮುಸಲ್ಮಾನ ದೊರೆಗಳು ಆಳುವಾಗ ಜನತೆಯನ್ನು ಮಲ್ತೊಗಳೂ ಬಹಳ ಹೆದರಿಕೆಯಲ್ಲಿ ಇಟ್ಟಿದ್ದರು. ಇವರ ಲೂಟಿ ದರೋಡೆ ಜನತೆಯ ಭೀತಿಗೆ ಮುಖ್ಯ ಕಾರಣವಾಗಿತ್ತು. ಮಲ್ತೋ ಭಾಷೆ ಹೋಲಿಕೆಯಲ್ಲಿ ಕುರುಖ್ ಭಾಷೆಗೆ ಹತ್ತಿರವಾಗಿದೆ. ಕಾಲಕ್ರಮೇಣ ದ್ರಾವಿಡೇತರ ಭಾಷೆಗಳ ಸಂಪರ್ಕಕ್ಕೆ ಒಳಗಾಗಿರುವ ಮಲ್ತೋ ಭಾಷೆಯ ಸಂಖ್ಯಾವಾಚಕ ಪದಗಳಲ್ಲಿ ಮೂರರವರೆಗೆ ಮಾತ್ರ ದ್ರಾವಿಡ ಪದಗಳಿದ್ದು ನಂತರದ ಶಬ್ದಗಳೆಲ್ಲಾ ಬಂಗಾಳ ಅಥವಾ ಬಿಹಾರಿ ಶಬ್ದಗಳಾಗಿವೆ.

**3) ಧಾಂಗರ್**

ನೇಪಾಳದ ದಕ್ಷಿಣ ಭಾಗದ ಧನುಸ್ಸ, ಮೆರಂಗ್, ಮನ್‌ಸುರಿ ಮುಂತಾದ ಜಿಲ್ಲೆಗಳ ಬೆಟ್ಟಗುಡ್ಡಗಳ ಪ್ರದೇಶದಲ್ಲಿ ವಾಸಿಸುವ ಆದಿವಾಸಿ ಜನಾಂಗಕ್ಕೆ ಸೇರಿದ ಹತ್ತು ಸಾವಿರಕ್ಕೂ ಹೆಚ್ಚು ಜನರು ಧಾಂಗರ್‌ಭಾಷೆಯನ್ನು ಆಡುವವರಿದ್ದಾರೆ. ಇದು ಕುರುಖ್ ಭಾಷೆಯನ್ನು ಹೆಚ್ಚು ಹೋಲುತ್ತದೆ. ಇದು ಕುರುಬ್ ಭಾಷೆಯ ಉಪ ಭಾಷೆ ಇರಬಹುದೆಂದು ಕೆಲವರ ಅಭಿಪ್ರಾಯ.

ಇದನ್ನು ಆಡುವ ಜನರನ್ನು ಧಾಂಗರಿಗಳು ಎಂದು ಕರೆಯುವರು. ಇದನ್ನು 1972 ರಲ್ಲಿ ಗುರುತಿಸಿಕೊಳ್ಳಲಾಯಿತಲ್ಲದೆ ಇದು ಸ್ವತಂತ್ರ ಹಾಗೂ ಪ್ರತ್ಯೇಕವಾದ ದ್ರಾವಿಡ ಭಾಷೆ ಎಂಬ ವಿಚಾರವು ತಿಳಿದು ಬಂದಿತು. ಇದರಲ್ಲಿ ನೇವಾರಿ ಭಾಷೆಯು ಪ್ರಭಾವವು ಕಂಡು ಬರುವುದು ಈ ಭಾಷೆ ಆಡುವ ಧಾಂಗರಿಗಳು ಅಸ್ಸಾಮ್‌ನ ಟೀ ತೋಟ ಪ್ರದೇಶಗಳಿಂದ ನೇಪಾಳದ ಕಡೆಗೆ ವಲಸೆ ಹೋಗಿರ ಬಹುದೆಂದು ಕೆಲವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇದು ಎಲ್ಲ ರೀತಿಯಲ್ಲಿಯೂ ಕುರುಖ್ ಭಾಷೆಯನ್ನೇ ಹೆಚ್ಚು ಹೋಲುತ್ತದೆಯಾದರೂ ಇದರಲ್ಲಿ ಕುರುಖ್ ಭಾಷೆಯ ಅನೇಕ ಅಂಶಗಳಿರುವುದು ಕಂಡುಬರುತ್ತದೆ. ಉತ್ತರ ಪ್ರದೇಶ , ಹಿಮಾಚಲ ಪ್ರದೇಶ, ಮಣಿಪುರ, ಸಿಕ್ಕಿಂ, ನಾಗಾಲ್ಯಾಂಡ್, ಅಸ್ಸಾಮ್, ಪಶ್ಚಿಮ ಬಂಗಾಳ, ಮಧ್ಯಪ್ರದೇಶ, ಬಿಹಾರ ಮುಂತಾದ ಕಡೆಗಳ ಬೆಟ್ಟಗುಡ್ಡಗಳಲ್ಲಿ ಕಿಸಾನ್ ಕುರುಖ್, ನಾಗೇಸಿಯ, ಧಾಂಗರ್ ಮಲೋ, ಸೌರಿಯ ಮುಂತಾದ ಭಾಷೆಗಳನ್ನು ಆಡುವ ಸಾವಿರಾರು ಜನರಿದ್ದಾರೆ. ಇದು ಧಾಂಗರ್, ಕುರುಖ್ ಮತ್ತು ಮಲ್ತೋ ಭಾಷೆಗಳನ್ನು ಹೆಚ್ಚು ಹೋಲುತ್ತದೆ. ಈ ಕಾರಣದಿಂದಾಗಿಯೇ ಧಾಂಗರ್ ಭಾಷೆ ಮಲ್ತೋ ಮತ್ತು ಕುರುಖ್ ಭಾಷೆಗಳ ಮಿಶ್ರಣವಿರಬಹುದೆಂದು ಕೆಲವರು ಊಹಿಸಿದ್ದಾರೆ.

ಆ) ಬ್ರಾಹೂಈ ಭಾಷಾವರ್ಗ

ಇದರಲ್ಲಿ ಬ್ರಾಹೂರಿ ಭಾಷೆ ಬಹಳ ಮುಖ್ಯವಾದದ್ದು. ಪಾಕಿಸ್ತಾನದ ಕೌಲತ, ಹರಿಪುರ, ಹೈದರಬಾದ್, ಆಫ್‌ಘಾನಿಸ್ತಾನದ ದಕ್ಷಿಣ ಭಾಗ, ಬಲೂಚಿ ಸ್ತಾನ, ಇರಾನ್, ಇರಾಕ್ ಮತ್ತು ದಕ್ಷಿಣ ರಷ್ಯ ಮುಂತಾದ ವ ಕಡೆಗಳಲ್ಲಿ, ಐದು ಲಕ್ಷಕ್ಕೂ ಹೆಚ್ಚು ಜನರು ಈ ಬ್ರಾಹೂಈ ಭಾಷೆ ಆಡುವರಿದ್ದಾರೆ. ಇದನ್ನು ಆಡುವವರು ಭಾರತದಲ್ಲಿ ಇಲ್ಲ. ಇದು ಇನ್ನೂ ಆಡು ಬಾಷೆಯಾಗಿಯೇ ಬಳಕೆಯಲ್ಲಿದೆ. ಇದನ್ನು ಬರೆಯಲು ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ಲಿಪಿಗಳನ್ನು ಬಳಸಲಾಗುತ್ತಿದೆ. 1838 ಆರ್.ಲೀಚ್ ಎಂಬಾತನು ಮೊತ್ತ ಮೊದಲಿಗೆ ಇದನ್ನು ಗುರುತಿಸಿ ಇದು ಸ್ವತಂತ್ರ ಹಾಗೂ ಪ್ರತ್ಯೇಕವಾದ ದ್ರಾವಿಡ ಭಾಷೆ ಎಂದು ತಿಳಿಯಪಡಿಸಿದನು. ಇತ್ತೀಚಿಗೆ ಪಾಕಿಸ್ತಾನ , ಆಪ್‌ಘಾನಿಸ್ತಾನ, ಬಲೂಚಿ ಸ್ಥಾನ, ಮುಂತಾದ ದೇಶಗಳ ಬ್ರಾಹೂ ಈ ಭಾಷೆಯ ಅಧ್ಯಯನಕ್ಕೆ ಹೆಚ್ಚು ಪ್ರೋತ್ಸಾಹ ದೊರಕಿಸಿಕೊಟ್ಟಿದೆ. ಬ್ರೇ ಎಂಬಾತನು ಬ್ರಾಹೂ ಈ ಭಾಷೆಯ ಅಧ್ಯಯನ ಕ್ರೇತ್ರಕ್ಕೆ ಉತ್ತಮ ಕಾಣಿಕೆ ಸಲ್ಲಿಸಿದ್ದಾರೆ. ಬ್ರಾಹೋಈ ಭಾಷೆಯಲ್ಲಿ ಇಂಡೋ ಇರಾನಿಯನ್ ಭಾಷೆಗಳ ಪ್ರಭಾವವು ಕಂಡು ಬರುವುದು.

1) ಬ್ರಾಹು ಈ ಭಾಷೆ

ಆರ್.ಲೀಚ್. ಎಂಬುವವರಿಂದ ಕ್ರಿ.ಶ.1838 ರಲ್ಲಿ ಮೊಟ್ಟಮೊದಲು ಗುರುತಿಸಲ್ಪಟ್ಟ ಭಾರತದದ ಹೊರಗೆ ಬಳಕೆಯಲ್ಲಿರುವ ಏಕೈಕ ದ್ರಾವಿಡ ಭಾಷೆಯೆಂದರೆ ಬ್ರಾಹು ಈ ಪಶ್ಚಿಮ ಪಾಕಿಸ್ಟಾನದ ಕಲತ್, ಹರಿಪುರ, ಹೈದ್ರಾಬಾದ್ ಜಿಲ್ಲೆಗಳಲ್ಲಿ ಹಾಗೂ ದಕ್ಷಿಣ ಅಪಘಾನಿಸ್ತಾನದ ಇರಾಣ, ದಕ್ಷಿಣ ರಶಿಯಾಗಳಲ್ಲಿ ಇಂದಿಗೂ ಸುಮಾರು ಐದು ಲಕ್ಷ ನಾಲ್ವತ್ತು

ಸಾವಿರದಷ್ಟು ಜನರ ಮಾತೃಭಾಷೆ ಬ್ರಾಹು ಈ ಆಗಿದೆ. ಪಾಕಿಸ್ತಾನದ ಕ್ವೆಟಾದಲ್ಲಿ ಬ್ರಾಹು ಈ ಅಕಾಡೆಮಿ ಇದೆ. ಬಲೂಚಿಸ್ತಾನದ ವಿಶ್ವ ವಿದ್ಯಾಲಯದಲ್ಲಿ ಬ್ರಾಹು ಈ ವಿಭಾಗವಿದೆ. ಬ್ರೇ ಅವರು ಬ್ರಾಹು ಈ ಭಾಷೆಯ ಅಧ್ಯಯನ ಕ್ಷೇತ್ರಕ್ಕೆ ಅಮೂಲ್ಯ ಕಾಣಿಕೆ ಸಲ್ಲಿಸಿದ್ದಾರೆ.

ಬ್ರಾಹೂಈ ಭಾಷೆಯಲ್ಲಿ ''ಕಿ'' ಪ್ರತ್ಯಯವಿದೆ. ಇದು ಪರ್ಷಿಯನ್ ಮತ್ತು ಹಿಂದೂಸ್ತಾನಿ ಭಾಷೆಗಳ ಪ್ರಭಾವದಿಂದ ಬಂದದ್ದು ಎಂಬ ಸೂಚನೆಯಿದೆ. ಆದರೆ ''ಕ್'' ಪ್ರತ್ಯಯ ದ್ರಾವಿಡ ಭಾಷೆಗಳಲ್ಲಿ ಸಹಜವಾದ ಚತುರ್ಥಿ ವಿಭಕ್ತಿ ಪ್ರತ್ಯಯವಾಗಿದೆ. ಅಲ್ಲದೆ ಇದರ ನೆರೆಹೊರೆಯ ಭಾಷೆಗಳಾದ ಬಲೂಚಿ, ಸಿಂಧಿ ಭಾಷೆಗಳ ಪ್ರಭಾವದಿಂದಾಗಿ ಬ್ರಾಹು ಈ ಭಾಷೆಯ ಶಬ್ದಗಳೂ ಕೆಲವೊಮ್ಮೆ ವಾಕ್ಯರಚನೆಯೂ ತಮ್ಮ ಮೂಲ ಸ್ವರೂಪವನ್ನು ಉಳಿಸಿಕೊಳ್ಳುತ್ತಿಲ್ಲ. ಜ್ಞಾತಿ ಭಾಷೆಗಳ ಸಂಪರ್ಕದಿಂದ ಬಹುದೂರದಲ್ಲಿ ಸುಮಾರು ಎಂಟು ನೂರು ಮೈಲಿಗಳಾಚೆ ಒಂಟಿಯಾಗಿ ನಿಂತ ಬ್ರಾಹು ಈ ಭಾಷೆ ದ್ರಾವಿಡ ಭಾಷೆಯ ಮೂಲ ವ್ಯಾಕರಣಾಂಶಗಳನ್ನು ಇನ್ನೂ ಉಳಿಸಿಕೊಂಡಿದೆ.

ಇಂಡೋ- ಆರ್ಯನ್ ಮತ್ತು ಇಂಡೋ - ಇರಾನಿಯನ್ ಭಾಷೆಗಳವರು ಬಂದು ಆಕಮಿಸುವುದಕ್ಕೂ ಪೂರ್ವದಲ್ಲಿ ದ್ರಾವಿಡರು. ಈಗ ಇರುವುದಕ್ಕಿಂತ ಹತ್ತು ಪಟ್ಟು ವ್ಯಾಪಕವಾಗಿ ಬಲೂಚಿಸ್ಥಾನದವರೆಗೂ ವ್ಯಾಪಿಸಿದ್ದರೆಂಬುದನ್ನು ಪಳೆಯುಳಿಕೆಯಾಗಿರುವ ಈ ಬ್ರಾಹು ಈ ಭಾಷೆ ತೋರಿಸುತ್ತದೆಂದು ನಂಬಲಾಗಿದೆ.

ಉತ್ತರ ಭಾರತದ ಯಾವುದೇ ಒಂದು ಗುಡ್ಡನಾಡಿನವರ ಭಾಷೆ ( ಉಪಭಾಷೆ) ಆಗಿದ್ದಿರಬಹುದಾದ ಜಿಪ್ಸಿ ( ಕೊರವಂಜ) ಭಾಷೆಯನ್ನು ಸ್ಮರಿಸಿಕೊಳ್ಳಬಹುದು ಅಲೆಮಾರಿಗಳಾದ ಈ ಕೊರವಂಜಿಗಳು ಹೋದ ಎಡೆಗಳೆಲ್ಲೆಲ್ಲ ಜಿಪ್ಸಿ ಭಾಷೆಯೂ ಹಿಂಬಾಲಿಸಿದೆ. ಹಲವು ದೇಶವಿದೇಶಗಳಲ್ಲಿ ಬಹು ವರ್ಷಗಳಿಂದ ಸುತ್ತಾಡಿ, ಆಯಾ ದೇಶದ ಭಾಷೆಗಳೊಡನೆ ಸಾಕಷ್ಟು ಸಂಪರ್ಕ ಹೊಂದಿ,ತನ್ನ ಸಹಜ ರೂಪವನ್ನು ಕಳೆದುಕೊಂಡಿದೆ. ಇಷ್ಟಾದರೂ ಅದರ ವ್ಯಾಕರಣ ಸ್ವರೂಪ ಭಾರತೀಯವಾಗಿಯೇ ಉಳಿದಿದೆ. ದ್ರಾವಿಡ ಕುಟುಂಬದ ಬ್ರಾಹು ಈ ಭಾಷೆಯ ಕತೆಯೂ ಹೀಗೆಯೇ ಆಗಿದೆ. ಇದು ದ್ರಾವಿಡ ವರ್ಗಕ್ಕೆ ಸೇರಿದ್ದು, ಕತೆಯೂ ಹೀಗೆಯೇ ಆಗಿದೆ. ಇದು ದ್ರಾವಿಡ ವರ್ಗಕ್ಕೆ ಸೇರಿದ್ದು ಎಂಬ ನಿಸ್ಸಂದೇಹ ತೀರ್ಮಾನಕ್ಕೆ ವ್ಯಾಕರಣ ಇಂಬಾಗಿದೆ. ಕನ್ನಡ ಭಾಷೆಯ ಒಂದು ಶಾಖೆಯಾಗಿದ್ದಿರಬಹುದೆಂಬ ಊಹೆಯನ್ನು ಕೆಲವರು ಮಾಡಿದ್ದಾರೆ. ಅವರಿಗೆ ಆಧಾರವೆಂದರೆ ನೇಪಾಳದಲ್ಲಿ ಒಂದು ಕಾಲಕ್ಕೆ ಇದ್ದ ಕರ್ನಾಟಕದ ಅರಸು ಮನೆತನಗಳ ಆಡಳಿತ ಈ ಹೇಳಿಕೆಯನ್ನು ಪೋಷಿಸುವ ಪೂರಕ ಸಾಮಾಗ್ರಿ ಸಾಲದಾಗಿದೆ.

# ಅಧ್ಯಾಯ -4

# ದ್ರಾವಿಡ ಪರಿವಾರದ ಭಾಷೆಗಳ ವರ್ಗೀಕರಣ ಮತ್ತು ವೈಶಿಷ್ಟಗಳು

ದಕ್ಷಿಣ ದ್ರಾವಿಡ

ಮಧ್ಯ ದ್ರಾವಿಡ

ಉತ್ತರ ದ್ರಾವಿಡ

## ದ್ರಾವಿಡ ಪರಿವಾರದ ಭಾಷೆಗಳ ವರ್ಗೀಕರಣ

ವಿಶ್ವದಾದ್ಯಂತ ಇರುವ ಸಾವಿರಾರು ಭಾಷೆಗಳನ್ನು ಅವುಗಳ ವಂಶ ಹಾಗೂ ರಚನೆಯನ್ನಾಧರಿಸಿ ಕೆಲವು ಮುಖ್ಯ ಪರಿವಾರ ಮತ್ತು ಉಪಗುಂಪುಗಳಾಗಿ ವಿಂಗಡಿಸಿರುವ ವಿಧಾನ ಭಾಷಾಸಕ್ತರಿಗೆ ಭಾಷಾಭ್ಯಾಸಿಗಳಿಗೆ ಹೆಚ್ಚಿನ ಅನುಕೂಲತೆಯಾಗಿದೆ. ಭಾಷಾ ವರ್ಗೀಕರಣ ಹೆಚ್ಚಿನ ಸಂಖ್ಯೆಯಲ್ಲಿ ಭಾಷೆಗಳನ್ನು ಕ್ರಮಬದ್ಧವಾಗಿ ಅಧ್ಯಯನ ಮಾಡಲು ಸಹಕಾರಿಯಾಗಿದೆ ತೌಲನಿಕ ಭಾಷಾ ವಿಜ್ಞಾನದ ಅಧ್ಯಯನದಿಂದ ವಿಶ್ವದಲ್ಲಿ ಪ್ರಚಲಿತವಿರುವ ಭಾಷೆಗಳು ಸರ್ವತಂತ್ರ ಸ್ವತಂತ್ರ ಎನ್ನಲಾಗದು. ಅವುಗಳಿಗೆ ಯಾವುದೋ ಒಂದು ಭಾಷೆ ಮೂಲವಾಗಿರುತ್ತದೆ. ಕಾಲಕ್ರಮೇಣ ಅದರಿಂದ ಕವಲೊಡೆದು ಸ್ವತಂತ್ರ್ಯ ಭಾಷೆಯ ಸ್ಥಾನಮಾನಗಳಿಸಿರುತ್ತವೆ. ತುಲನಾತ್ಮಕ ವಿಧಾನದಲ್ಲಿ ಮುಖ್ಯವಾಗಿ ಭಾಷೆಗಳ ಅನುವಂಶಿಕತೆ, ಪ್ರರೂಪ ಮತ್ತು ಕ್ಷೇತ್ರಿಯ ಪದ್ದತಿಗಳ ಮೂಲಕ ವರ್ಗೀಕರಿಸಲಾಗಿದೆ. ಇದರಿಂದ ಮೂಲ ಭಾಷೆಯಿಂದ ಬೆಳೆದು ಬಂದುದನ್ನು ಅನುವಂಶಿಕ ಪರಸ್ಪರ ಸಂಬಂಧದ ಮೇಲೆ ಭಾಷೆಗಳನ್ನು ಗುರುತಿಸಲಾಗುವುದು.

ವಿದೇಶಿ ವಿದ್ವಾಂಸರಿಂದ 18ನೇ ಶತಮಾನದಲ್ಲಿ ಭಾರತೀಯ ವಿವಿಧ ಭಾಷಾ ವರ್ಗಗಳ ತೌಲನಿಕ ಅಧ್ಯಯನ ಆರಂಭವಾಗುವ ಮೊದಲು ಪೂರ್ವಜರು ಭಾರತೀಯ ಭಾಷೆಗಳನ್ನು 'ಪಂಚದ್ರಾವಿಡ' ಹಾಗೂ ''ಪಂಚಗೌಡ'' ಎಂದು ವಿಭಿಸಿದ್ದರು. ಆದರೆ ಈ ವಿಭಜನೆ ವೈಜ್ಞಾನಿಕ ರೀತಿಯಲ್ಲಿ ಆಗಿರಲಿಲ್ಲ. ಅವರ ದೃಷ್ಠಿಯಲ್ಲಿ ಈ ಎರಡು ಗುಂಪಿನ ಭಾಷೆಗಳು ಇಂತಿದ್ದವು.

ಪಂಚದ್ರಾವಿ : ತಮಿಳು, ತೆಲುಗು, ಕನ್ನಡ, ಗುಜರಾತಿ, ಮತ್ತು ಮರಾಠಿ ಪಂಚಗೌಡ : ಸಾರಸ್ವತ, ಕಾನ್ಯಕುಬ್ಜ, ಗೌಡ, ಮೈಥಿಲಿ ಮತ್ತು ಉತ್ಕಲ

ಈ ವರ್ಗಗಳ ಮುಖ್ಯ ಆಶಯಭಾರತದ ಉತ್ತರ ಹಾಗೂ ದಕ್ಷಿಣ ಭಾಗಗಳಲ್ಲಿ ಬಹಳ ಪ್ರಚಲಿತದಲ್ಲಿರುವ ಭಾಷೆಗಳನ್ನು ಪ್ರತ್ಯೇಕವಾಗಿ ವಿಭಾಗಿಸುವ ಪ್ರಯತ್ನ ನಡೆದಿತ್ತು. ಕೆಲವರು ಇದು ಆಯಾ ಪ್ರದೇಶಗಳ ಜನರ ಆಚಾರ - ಸಂಸ್ಕೃತಿಗಳ ಪ್ರಭೇದಗಳನ್ನು ಬಿಂಬಿಸುವ ವರ್ಗೀಕರಣ ಮಾಡಿರಬಹುದೆಂದು ಅಭಿಪ್ರಾಯಪಟ್ಟರೆ, ನರಸಿಂಹಾಚಾರ್ಯ ಅವರು ಪಂಚದ್ರಾವಿಡ ದಲ್ಲಿ ಗುಜರಾತಿ ಹಾಗೂ ಮರಾಠಿ ಭಾಷೆಗಳು ಸೇರಿರುವುದಕ್ಕೆ ಅವುಗಳಲ್ಲಿ ದ್ರಾವಿಡ ಭಾಷೆಗಳ ಕೆಲ ಸಾದೃಶ್ಯಗಳು ಗೋಚರಿಸಿರುವುದೇ ಮುಖ್ಯ ಕಾರಣ ಎಂದಿದ್ದಾರೆ. ಭಾಷಿತ ಹಿನ್ನೆಲೆಯಲ್ಲಿ ಈ ಎರಡು ಭಾಷೆ ಇಂಡೋ ಆರ್ಯನ ಭಾಷಾ ವರ್ಗಕ್ಕೆ ಸೇರಿದವು ಎನ್ನುವಲ್ಲಿ ಯಾವ ಅನುಮಾವೂ ಇಲ್ಲ ಶ್ರೀರಂಗಪಟ್ಟಣದ ಕೃಷ್ಣಾಮಾಚಾರ್ಯ ಅವರು ತಮ್ಮ 'ಹೊಸಗನ್ನಡ ನುಡಿಗನ್ನಡಿ' ಎಂಬ ಹೊಸಗನ್ನಡ ವ್ಯಾಕರಣ ಕೃತಿಯಲ್ಲಿ 'ಪಂಚದ್ರಾವಿಡ' ಪದ ಉಲ್ಲೇಖಿಸುತ್ತಾ ದ್ರಾವಿಡ ಕೇರಳ ತಾಳವ (ತುಳು) ಕರ್ಣಾಟಾಂಧ್ರ ಭಾಷೆಗಳು ಅದರಲ್ಲಿ ಸಮಾವೇಶವಾಗುತ್ತದೆಂದಿದ್ದಾರೆ (1838) ಭೌಗೋಳಿಕ ವಿಭಜನೆಯಲ್ಲಿ ವಾಸ್ತವಿಕತೆ ಇದೆ.

ದ್ರಾವಿಡ ಭಾಷೆಗಳಲ್ಲಿ ಹಾಸುಹೊಕ್ಕಾದ ಸಂಸ್ಕೃತಿ ಭೂಯಿಷ್ಟ ಅಥವಾ ಅಪಭ್ರಂಶ ರೂಪಗಳು ಹೇರಳವಾಗಿರುವುದನ್ನು ಆಧರಿಸಿ ಭಾರತೀಯ ಹಾಗೂ ಪಾಶ್ಚಾತ್ಯ ಭಾಷಾತಜ್ಞರೆಲ್ಲರೂ ಸಂಸ್ಕೃತ ಜನ್ಯ ಎಂದೇ ಭಾವಿಸಿದ್ದರು. ಆದರೆ 18ನೇ ಶತಮಾನದ ನಂತರ ಭಾಷೆಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿದರ ಪರಿಣಾಮ ಭಾಷೆಯಲ್ಲಿನ ವಿಶೇಷ ಭಾಷಿಕಾಂಶಗಳು ಕಂಡುಬಂದವು. ಇದರಿಂದ ಕನ್ನಡ ಭಾಷೆ ಸಂಸ್ಕೃತ ಜನ್ಯ ಅಲ್ಲವೆಂದು ಅದು ದ್ರಾವಿಡ ಭಾಷಾ ಪರಿವಾರಕ್ಕೆ ಸೇರಿದ್ದು ಎನ್ನುವುದಕ್ಕೆ ಸಾಕಷ್ಟು ದಾಖಲೆ ದೊರೆಯಿತು. ಸಂಸ್ಕೃತದಿಂದ ದ್ರಾವಿಡ ಭಾಷೆಗಳು ಶ್ರೀಮಂತಗೊಂಡಿವೆ. ಆಧುನಿಕ ಕಾಲದಲ್ಲಿ ಇಂಗ್ಲೀಷ್ ಪ್ರಭಾವದಂತೆ ಹಿಂದೆ ಸಂಸ್ಕೃತದ ಪ್ರಭಾವಿದ್ದಿತಷ್ಟೆ, ಕೃಷ್ಣಶಾಸ್ತ್ರಿ ಅವರು ಹೇಳುವಂತೆ ಸಂಸ್ಕೃತ ಕನ್ನಡ ಭಾಷೆಗೆ, ಪ್ರೇರಕ, ಪೋಷಕ ಮತ್ತು ಗುರು ಎಂಬ ಮಾತು ಅರ್ಥಪೂರ್ಣ ದ್ರಾವಿಡ ಹಾಗೂ ಸಂಸ್ಕೃತಕ್ಕೆ ಇರುವುದು ಜನ್ಯ - ಜನಕ ಸಂಬಂಧವಲ್ಲ ಅಂಗಿ - ಅಂಗಕ್ಕೂ ಇರುವ ಸಂಬಂಧ ಎಂದಷ್ಟೇ ಹೇಳಬಹುದು.

ಆಧುನಿಕ ಭಾಷಾ ವಿಜ್ಞಾನಿಗಲು ತೌಲನಿಕ ಹಿನ್ನೆಲೆಯಲ್ಲಿ ನಿರ್ಣಯಿಸುವಾಗ ಎರಡು ಮುಖ್ಯ ತತ್ವಗಳನ್ನೂ ಅನುಸರಿಸುವರು ಆಯಾ ಭಾಷೆಗಳಲ್ಲಿ ಕಂಡು ಬರುವ ಸಮಾನ ಪದಗಳ ಸಾದೃಶ್ಯವನ್ನಾಧರಿಸಿ. ಅವು ಒಂದೇ ಮೂಲದಿಂದ ಬಂದಿದೆಯೇ ಎಂದು ಪರಿಶೀಲಿಸುವರು. ಎರಡು ಸಂಬಂಧಿತ ಭಾಷೆಗಳಲ್ಲಿ ಕಂಡುಬರುವ ಸಮಾನ ರೂಪಗಳನ್ನಾಧರಿಸಿ ಅಂತಹ ರೂಪಗಳನ್ನು ಜ್ಞಾತಿ ಪದಗಳೆನ್ನುವರು ಜ್ಞಾತಿ ಎಂದರೆ. ಸಂಬಂಧಿ ಎಂದರ್ಥ ಇಲ್ಲಿ ಒಂದೇ ಮೂಲದಿಂದ ಹೊರಟ ಭಿನ್ನ ಭಾಷೆಗಳಲ್ಲಿನ ಪದಗಳನ್ನು ಹೋಲಿಸುವಾಗ ಸಾದೃಶ್ಯತೆ ಕಂಡುಬರುವ ವಂಶ, ರಚನೆ ಮತ್ತು ಪ್ರದೇಶ ಇವನ್ನು ಆಧರಿಸಿ ವಾಂಶಿಕ ವರ್ಗೀಕರಣ ರಾಚನಿಕ ವರ್ಗೀಕರಣ ಮತ್ತು ಕ್ಷೇತ್ರಿಯ ಪದ್ದತಿ ಎಂದು ವಿಭಾಗಿಸುವರು.

ಭಾರತದ ಪೂರ್ವ ಭಾಗದಲ್ಲಿ ಒರಿಸ್ಸಾದಿಂದ ಆಚೆಗೆ ಪಶ್ಚಿಮದಲ್ಲಿ ಗುಜರಾತ್ ಮಹಾರಾಷ್ಟ್ರ ರಾಜ್ಯಗಳನ್ನು ಹೊರತುಪಡಿಸಿದಂತೆ ಮಿಕ್ಕೆಲ್ಲಾ ಪ್ರದೇಶಗಳಲ್ಲೂ ಬಹುತೇಕ ದ್ರಾವಿಡ ಭಾಷೆಗಳ ಬಳಕೆ ಇದೆ. ಭಾರತವಷ್ಟೇ ಅಲ್ಲದೆ ನೆರೆಯ ಶ್ರೀಲಂಕಾದ ಉತ್ತರ ಪೂರ್ವ - ಭಾಗಗಳಲ್ಲಿ ತಮಿಳನ್ನು ಮಾತೃಭಾಷೆಯಾಗಿ ಹೊಂದಿರುವವರು ಬಹು ಸಂಖ್ಯೆಯಲ್ಲಿದ್ದಾರೆ. ತೀರ ಉತ್ತರದಲ್ಲಿ ಛೋಟಾ, ನಾಗಪುರ ರಾಜ್‌ಮಹಲ್ ಪರ್ವತ ಶ್ರೇಣಿಗಳಲ್ಲೂ ದ್ರಾವಿಡ ಭಾಷೆಯನ್ನಾಡುವವರು ಕಂಡುಬರುತ್ತಾರೆ. ಇಂದು ಭಾರತದಿಂದ ಸಂಪೂರ್ಣ ಹೊರಗುಳಿದ ಏಕೈಕ ದ್ರಾವಿಡ ಭಾಷೆಎಂದರೆ ಬ್ರಾಹೂಈ ಭಾರತದ ವಾಯುವ್ಯ ಭಾಗವಾದ ಪಾಕಿಸ್ತಾನ ದೇಶದ ಬಲೂಚಿಸ್ತಾನದಲ್ಲಿ ಬ್ರಾಹೂಈ ಮಾತೃ ಭಾಷಿಕರು ಕಂಡುಬರುತ್ತಾರೆ.

ಬ್ರಾಹೂಈ ಉಳಿದಂತೆ ಮಿಕ್ಕೆಲ್ಲಾ ದ್ರಾವಿಡ ಭಾಷೆಗಳನ್ನಾಡುವವರು ಭಾರತದಾದ್ಯಂತ ಇದ್ದಾರೆ. ಪ್ರಪಂಚದ ಪ್ರಮುಖ ಭಾಷಾ ಪರಿವಾರದಲ್ಲಿ ದ್ರಾವಿಡ ಪರಿವಾರದಲ್ಲಿ ದ್ರಾವಿಡ ಪರಿವಾರ ಪ್ರಮುಖ ಮಹತ್ವ ಹೊಂದಿದೆ. ಇದನ್ನು

ಮುಖ್ಯವಾಗಿ ನಾಲ್ಕು ಒಳಗುಂಪುಗಳಾಗಿ ವಿವೇಚಿಸಲಾಗಿದೆ. ಅವು

1. ಉತ್ತರ ದ್ರಾವಿಡ ಗುಂಪು
2. ಮಧ್ಯ ದ್ರಾವಿಡ ಗುಂಪು
3. ದಕ್ಷಿಣ ಮಧ್ಯ ಗುಂಪು
4. ದಕ್ಷಿಣ ಮದ್ಯ ಗುಂಪು

ಇದನ್ನು ಕೆಲವು ವಿದ್ವಾಂಸರು 3 ಹಂತದಲ್ಲಿ ವರ್ಗೀಕರಿಸಿದ್ದಾರೆ.

1. ಉತ್ತರ ದ್ರಾವಿಡ ಭಾಷೆ
2. ಮಧ್ಯ ದ್ರಾವಿಡ ಭಾಷೆ
3. ದಕ್ಷಿಣ ದ್ರಾವಿಡ ಭಾಷೆ

ಇಂದು ದ್ರಾವಿಡ ಭಾಷೆಯಲ್ಲಿ ಈ ಬಗೆಯ ವರ್ಗೀಕರಣ ಬಹಳ ಪ್ರಚಲಿತವಾಗಿದೆ. ಮೂಲ ದ್ರಾವಿಡ ಭಾಷೆಯೊಂದರಿಂದ ಕವಲೊಡೆದು ಬೆಳೆದು ಹಲವಾರು ಸ್ವತಂತ್ರ್ಯ ಭಾಷೆಗಳಾಗಿ ಉಪ ಭಾಷೆಯಾಗಿ, ಮರಿಭಾಷೆಗಳಾಗಿ ದ್ರಾವಿಡ ಭಾಷೆಗಳು ಬೆಳೆದಿವೆ. ದ್ರಾವಿಡ ಭಾಷೆಗಳು ಕವಲೊಡೆದು ಬೆಳದಿರುವಿಕೆಯನ್ನು ಅವುಗಳ ವರ್ಗೀಕರಣವನ್ನು ಪರಸ್ಪರ ಅವುಗಳಗಿರುವ ಅನುವಂಶಿಕ ಸಂಬಂಧದ ಆಧಾರದ ಮೇಲೆ ಸ್ವತಂತ್ರ ಭಾಷೆ ಉಪ ಭಾಷೆ ಎಂದು ವರ್ಗೀಕರಿಸಿದೆ. ಈ ನಿಟ್ಟನಲ್ಲಿ ಭಾಷೆಗಳು ಮೂಲದಿಂದ ಉಳಿಸಿಕೊಂಡು ಬಂದಿರುವ ಮೂಲಾಂಶಗಳು ಮುಂತಾ ಸಂಗತಿಗಳನ್ನು ಗುರುತಿಸಿ ಅದರ ಆಧಾರದ ಮೇಲೆ ಕಾಲಾನುಕ್ರಮದಲ್ಲಿ ಮೂಲದಿಂದ ಹೇಗೆ ಹೊರಬಂದವು ಈ ಎಲ್ಲ ಸಂಗತಿಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಸಂಬಂಧಿ ಭಾಷೆಗಳಲ್ಲಿ ಕಂಡುಬರುವ ಸಾಮಾನ್ಯ ಅಂಶ, ರಚನೆ, ಭಿನ್ನ ಕಾಲ ಘಟ್ಟಗಳಲ್ಲಿ ಆಗಿರುವ ಭಾಷಿಕ ಬದಲಾವಣೆ ಇತ್ಯಾಧಿ ಸಂಗತಿಗಳು ಭಾಷೆಯ ಐತಿಹಾಸಿಕ ಹಾಗೂ ತೌಲನಿಕ ಅಧ್ಯಯನಕ್ಕೆ ಸಹಕಾರಿಯಾಗಿವೆ. ಈ ಎರಡರ ಅಧ್ಯಯನದಿಂದ ಬಾಷಾ ವರ್ಗೀಕರಣ ಸುಲಭ ಸಾಧ್ಯವಾಗಿದೆ.

ದ್ರಾವಿಡ ಭಾಷೆಗಳ ಪರಸ್ಪರ ಸಂಬಂಧದ ಬಗ್ಗೆ ಕಾಲ್ಡ್‌ವೆಲ್ ಪ್ರಥಮ ಬಾರಿಗೆ ಗುರುತಿಸಿದರು. ತಮಿಳು, ಮಲೆಯಾಳಂ ತೀರ ಹತ್ತಿರದ ಸಂಬಂಧ ಹೊಂದಿದ್ದರೆ ತೆಲುಗು ಇದರಿಂದ ದೂರ ನಿಲ್ಲುತ್ತದೆಂದೂ ತುಳು ತಮಿಳು ಹಾಗೂ ಮಲೆಯಾಳಂ ಭಾಷೆಗೆ ಸಂಬಂಧ ಹೊಂದಿದೆ. ಎಂದು ವಿವರಿಸಿದ್ದಾರೆ. ತಮಿಳು ಮತ್ತು ಮಲೆಯಾಳಂಗೆ ಇರುವ ನಿಕಟತೆ ತುಳು, ಮಲೆಯಾಳಂಗೆ ಇಲ್ಲ ಎಂದಿದ್ದಾರೆ. ಕೊಡಗಿಗೆ ಹತ್ತಿರವಾದರೂ ಕನ್ನಡಕ್ಕೆ ದೂರವಾಗಿಲ್ಲ ಎಂದಿರುವರು. ಅದರೆ ಬ್ರಾಹು ಈ ಭಾಷೆಯನ್ನು ದ್ರಾವಿಡ ಭಾಷಾ ಗುಂಪಿಗೆ ಸೇರಿಸಲಿಲ್ಲ. ಕಾರಣ ಬ್ರಾಹು ಈ ಭಾಷೆ ಯಲ್ಲಿನ ಭಾಷೆಕಾಂಶಗಳು ದ್ರಾವಿಡ ಭಾಷೆಗಳಿಗಿಂತ

ಹೆಚ್ಚಾಗಿ ಪಂಜಾಬಿ, ಸಿಂಧಿಯನ್ನು ಹೋಲುವುದರಿಂದ ಸೇರಿಸಿಲ್ಲ ಎಂಬವಾದ ಮುಂದಿಟ್ಟದ್ದಾರೆ. ಆದರೆ ಇತ್ತೀಚಿನ ಅಧ್ಯಯನ ಗಳಿಂದ ಬ್ರಾಹು ಈ ಸ್ವತಂತ್ರ ದ್ರಾವಿಡ ಭಾಷೆ ಎನ್ನುವಲ್ಲಿ ಎರಡು ಮಾತಿಲ್ಲ. ದ್ರಾವಿಡ ಭಾಷೆಗಳ ವಂಶಕ್ಕನುಗುಣವಾದ ವರ್ಗೀಕರಣವನ್ನಾಗಲಿ ಶಾಸ್ತ್ರೀಯವಾದ ವಿಭಾಗ ಕ್ರಮವನ್ನಾಗಲೀ ಕಾಲ್ಡ್‌ವೆಲ್ ತಿಳಿಸಿಲ್ಲ . ಆದರೆ ಅದರ ಸಂಬಂಧದ ಸ್ಥೂಲ ಚಿತ್ರಣ ನೀಡಿದ್ದಾರೆ.

ದ್ರಾವಿಡ ಭಾಷೆಗಳ ವರ್ಗೀಕರಣದಲ್ಲಿ ಮುಖ್ಯವಾಗಿ ಸೈನ್ ಕೋನೊ ಹಾಗೂ ಭದ್ರಿರಾಜು ಕೃಷ್ಣಮೂರ್ತಿ ಪ್ರಮುಖ ಪಾತ್ರ ವಹಿಸಿದ್ದಾರೆ.

**ಸೈನ್‌ಕೊನೋ ವರ್ಗೀಕರಣ :**

ಇವರು ದ್ರಾವಿಡ ಭಾಷೆಗಳನ್ನು ಮುಖ್ಯವಾಗಿ 1) ಉತ್ತರ ದ್ರಾವಿಡ 2) ಮಧ್ಯದ್ರಾವಿಡ 3) ದಕ್ಷಿಣ ದ್ರಾವಿಡ ಎಂದು ವಿಭಾಗಿಸಿದ್ದಾರೆ. ಕ್ರಿ.ಪೂ. 5000 ಸುಮಾರಿಗೆ ಇಂದಿನ ದ್ರಾವಿಡ ಬಾಷೆಗಳಿಗೆಲ್ಲ ಮೂಲವಾಗಿದ್ದ ಪಿತೃಭಾಷೆ ಬಂದಿತೆಂಬ ಅಭಿಪ್ರಾಯವನ್ನು ಬಹುತೇಕ ವಿದ್ವಾಂಸರು ಅಂಗೀಕರಿಸಿದ್ದಾರೆ. ಈ ಮೂಲ ದ್ರಾವಿಡ ಭಾಷೆಯಲ್ಲಿ ಕಾಲಾ ನಂತರದಲ್ಲಿ ಮೇಲೆ ತಿಳಿಸಿದಂತೆ ಮೂರು ಪ್ರಭೇದಗಳಾಗಿ ಒಡೆದಿರಬೇಕೆಂದೂ ತೀರ್ಮಾನಿಸಿ ತದ ನಂತರದಲ್ಲಿ ಮೊದಲಿಗೆ ಉತ್ತರ ದ್ರಾವಿಡ ಭಾಷೆಗಳಿಗೆ ಮೂಲವಾದ ಭಾಷೆ ಕ್ರಿ.ಪೂ. ಸು. 4000 ದಲ್ಲಿ ನಂತರ ಮಧ್ಯದ್ರಾವಿಡ ಭಾಷೆಗಳಿಗೆ ಮೂಲವಾದ ಭಾಷೆ ಕ್ರಿ. ಪೂ. ಸು. 3000 ದಲ್ಲಿ ಕೊನೆಯಲ್ಲಿ ದಕ್ಷಿಣ ದ್ರಾವಿಡ ಭಾಷೆಗಳಿಗೆ ಮೂಲವಾದ ಭಾಷೆ ಕ್ರಿ.ಪೂ. ಸು. 1000 ದಲ್ಲಿ ಕವಲೊಡೆದಿರಬಹುದೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ಜಾರ್ಜ್ ಎ. ಗ್ರಿಯರ್‌ಸನ್ ಮತ್ತು ಸೈನ್‌ಕೊನೋ ಎಂಬುವವನು ಭಾರತೀಯ ಭಾಷೆಗಳ ಸರ್ವೇಕ್ಷಣಾ ಕಾರ್ಯವನ್ನು ಆರಂಭಿಸಿ ಅದರಲ್ಲಿ ದ್ರಾವಿಡ ಭಾಷೆಗಳನ್ನು ಐದು ವರ್ಗಗಳಲ್ಲಿ ವರ್ಗೀಕರಿಸಿಕೊಂಡರು.

1) ಆಂಧ್ರವರ್ಗ (ತೆಲುಗು, ಕೊಲಾಮಿ ಇತ್ಯಾದಿ)

2) ದ್ರಾವಿಡ ವರ್ಗ (ತಮಿಳು, ಮಲೆಯಾಳಂ, ತುಳು, ಕೊಡಗು, ತೊದ,ಕೋತ, ಕನ್ನಡ ಇತ್ಯಾದಿ)

3) ಮಧ್ಯವರ್ತಿ ವರ್ಗ (ಗೊಂಡಿ, ಮೊಲ್ತೊ, ಕುಇ ಇತ್ಯಾದಿ)

4) ವಾಯರ್ವವರ್ಗ (ಬ್ರಾಹೊಈ ಇತ್ಯಾದಿ)

5) ಅರ್ಧ ದ್ರಾವಿಡ ವರ್ಗ ( ಭರಿಯ, ಲಧದಿ ಇತ್ಯಾದಿ)

ಇವರ ಈ ವರ್ಗೀಕರಣದ ಸ್ಪಷ್ಟವಾಗಿಲ್ಲ. ಕಾರಣ ಇವರ ಉತ್ತರ ಭಾರತದ ಎಲ್ಲ ಭಾಷೆಗಳನ್ನು ಪರಿವೀಕ್ಷಿಸಿ ದಕ್ಷಿಣ ಭಾರತದ ಭಾಷೆಗಳನ್ನು ಸ್ಪಷ್ಟವಾಗಿ ಗುರುತಿಸುವ ಕಾರ್ಯ ಪೂರ್ಣವಾಗಿರಲಿಲ್ಲ. ಇವರ ವರ್ಗೀಕರಣಕ್ಕೆ ದ್ರಾವಿಡ ಭಾಷೆಗಳ ಭೌಗೋಳಿಕ ಅಂಶಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗಿದೆಯೇ ವಿನಾ ಅವುಗಳ ವಿಶಿಷ್ಟವಾದ ರಚನಾತ್ಮಕ ಅಂಶಗಳನ್ನು

ಗಣನೆಗೆ ತೆಗೆದುಕೊಂಡಿಲ್ಲ, ಭರಿಯ ಮತ್ತು ಲಧದಿ ಭಾಷೆಗಳನ್ನು ಅರ್ಧ ದ್ರಾವಿಡಎಂದು ಹೆಸರಿಸಿರುವುದೇ ಅವರ ಅಸಮರ್ಥತೆಯನ್ನು ತೋರುತ್ತದೆ. ಈ ಬಗೆಯ ಭಾಷಾ ವರ್ಗೀಕರಣ ಮೊದಲ ಪ್ರಯತ್ನ ಅಷ್ಟೇ, ಇದೇ ಪೂರ್ಣ ವರ್ಗೀಕರಣವಲ್ಲ. ಇದರಲ್ಲಿ ಅನೇಕ ನ್ಯೂನತೆಗಳಿಗೆ ಇದನ್ನು ಗಮನಿಸಿದ ಸುನೀತಿಕುಮಾರ ಚಟರ್ಜಿಯವರು ದ್ರಾವಿಡ ಭಾಷೆಗಳನ್ನು ಇನ್ನೂ ವ್ಯವಸ್ಥಿತ ರೀತಿಯಲ್ಲಿ ವರ್ಗೀಕರಿಸಿಕೊಳ್ಳಲು ಪ್ರಯತ್ನಿಸಿದರು. ಇದರಿಂದ ದ್ರಾವಿಡಭಾಷೆಗಳನ್ನು ಹೆಚ್ಚು ವ್ಯವಸ್ಥಿತವಾಗಿ ವರ್ಗೀಕರಿಸಿಕೊಳ್ಳಲು ಸಾಧ್ಯವಾಯಿತು. ಮುಂದಿನ ಭಾಷಾ ವಿಜ್ಞಾನಿಗಳು ಈ ವರ್ಗೀಕರಣವನ್ನು ಗಮನದಲ್ಲಿರಿಸಿಕೊಂಡು ದ್ರಾವಿಡ ಭಾಷೆಗಳನ್ನು ಭೌಗೋಳಿಕ, ವಾಂಶಿಕ ರಚಾನಾತ್ಮಕವಾಗಿ ದಕ್ಷಿಣ ದ್ರಾವಿಡ ಭಾಷೆಗಳು, ಮಧ್ಯದ್ರಾವಿಡ ಭಾಷೆಗಳು ಮತ್ತು ಉತ್ತರ ದ್ರಾವಿಡ ಭಾಷೆಗಳು ಎಂದು ಮೂರು ವರ್ಗಗಳಲ್ಲಿ ವರ್ಗೀಕರಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಇದರಿಂದ ದ್ರಾವಿಡ ಭಾಷೆಗಳ ವರ್ಗೀಕರಣ ಹೆಚ್ಚು ಸಮರ್ಪಕವಾಗಿ ಮುಂದುವರೆಯಲು ಸಾಧ್ಯವಾಯಿತು ಮತ್ತು ಭದ್ರಿರಾಜು ಕೃಷ್ಣಮೂರ್ತಿ ಅವರ ದ್ರಾವಿಡ ಭಾಷಾ ವರ್ಗೀಕರಣ

ಭ. ಕೃಷ್ಣಮೂರ್ತಿರವರ ವರ್ಗೀಕರಣ ವಿಧಾನವನ್ನು ಬಹುತೇಕ ವಿದ್ವಾಂಸರು ಒಪ್ಪಿದ್ದಾರೆ.

1. ದಕ್ಷಿಣ ದ್ರಾವಿಡ ಭಾಷೆ
2. ದಕ್ಷಿಣ ಮಧ್ಯ ಭಾಷೆ
3. ಮಧ್ಯ ದ್ರಾವಿಡ ಭಾಷೆ
4. ಉತ್ತರ ದ್ರಾವಿಡ ಭಾಷೆ

ದ್ರಾವಿಡ ಭಾಷೆಗಳನ್ನು ಪ್ರಮುಖವಾಗಿ 4 ವರ್ಗವಾಗಿ ವಿಭಾಗಿಸಿದ್ದಾರೆ, ಮೇಲ್ನೋಟಕ್ಕೆ ಇವು ಭೌಗೋಳಿಕ ಆಧಾರದ ಮೇಲೆ ವರ್ಗೀಕರಿಸಿದೆ ಎಂಬ ಅಭಿಪ್ರಾಯಕ್ಕೆ ಬರಬಹುದಾದರೂ ಮುಖ್ಯವಾಗಿ ಆಯಾ ವರ್ಗದ ಭಾಷೆಗಳ ಗುಂಪಿನ ಆಧಾರದ ಮೇಲೆಯೇ ವರ್ಗೀಕರಿಸಿದೆ ಮತ್ತು ಸ್ವತಂತ್ರವಾಗಿ ಬೆಳೆಸಿಕೊಂಡು ಬಂದಿರುವ ಭಾಷಾ ವಿಶೇಷತೆಗಳ ಬಗೆಗೂ ಸಹ ಗಮನ ಹರಿಸಿದೆ.

ತೆಲಗು ಭಾಷಾ ಪ್ರದೇಶ ಭೌಗೋಳಿಕವಾಗಿ ದಕ್ಷಿಣ ಭಾರತಕ್ಕೆ ಸೇರಿದರೂ ತೆಲುಗು ಭಾಷೆಯನ್ನು ಮಧ್ಯ ದ್ರಾವಿಡದಲ್ಲಿ ತರಲಾಗಿದೆ. ಕಾರಣ ತೆಲುಗು ಭಾಷಾ ರಚನೆಯಲ್ಲಿ ದಕ್ಷಿಣ ದ್ರಾವಿಡಗಳಿಗಿಂತ ಹೆಚ್ಚಾಗಿ ಮಧ್ಯದ ದ್ರಾವಿಡ ಭಾಷೆಗಳಿಗೆ ಬಹು ಹತ್ತಿರವಾಗಿ ಕಂಡು ಬಂದಿದೆ. ಹಾಗಾಗಿ ತಮಿಳು, ಕನ್ನಡ ಮಲೆಯಾಳಂಗಳಿಂದ ಹಲವು ಅಂಶಗಳಲ್ಲಿ ಭಿನ್ನತೆ ತೋರುವ ಕಾರಣ ತೆಲುಗನ್ನು ದಕ್ಷಿಣ ಮಧ್ಯ ದ್ರಾವಿಡ ಭಾಷಾ ವರ್ಗಕ್ಕೆ ಸೇರಿಸಿರುವುದು ಯೋಗ್ಯವಾಗಿದೆ. ವರ್ಣ ಪಲ್ಲಟ, ಸ್ವರಾನುರೂಪ್ಯತೆ, ಘೋಷಧ್ವನಿಮಾಗಳ ಪ್ರಾಬಲ್ಯ, ಲಿಂಗ ವ್ಯವಸ್ಥೆ ಮುಂತಾದ ಕೆಲವು ವಿಶಿಷ್ಟ ಭಾಷಿಕಾಂಶಗಳನ್ನು ತೆಲುಗು ವ್ಯವಸ್ಥಿತವಾಗಿ ಬೆಳೆಸಿಕೊಂಡಿದೆ, ತೆಲುಗಿನ ಭಾಂಧ್ಯವ್ಯ ಕುವಿ, ಕೊಂಡ ಮೊದಲಾದ ಮಧ್ಯ ದ್ರಾವಿಡ ಗುಂಪಿಗೆ

ಹೆಚ್ಚು ಸನಿಹದ್ದು, ಆದರೂ ತೆಲುಗಿನ ಮೇಲೆ ತಮಿಳು ಮತ್ತು ಕನ್ನಡದ ಪ್ರಭಾವ ಗೋಚರಿಸುವಂತಹದು, ಇದಕ್ಕೆ ಕಾರಣ ಭೌಗೋಳಿಕ ಸಾಮಿಪ್ಯವಿರಬಹುದು, ತೆಲುಗು ಆಕೃತಿಯಾ ಮಟ್ಟದಲ್ಲಿ ಧ್ವನಿಮಾ ಮಟ್ಟಕ್ಕಿಂತ ದಕ್ಷಿಣ ದ್ರಾವಿಡ ಭಾಷೆಗಳಿಗೆ ಭಿನ್ನವಾಗಿದೆ. ಇದನ್ನು ಗಮನಿಸಿರುವ ಭ. ಕೃಷ್ಣಮೂರ್ತಿ ತೆಲುಗು ಮಧ್ಯ ದ್ರಾವಿಡ ಗುಂಪಿಗೆ ಸೇರುವುದೆಂದು ಖಚಿತಪಡಿಸಿದ್ದಾರೆ. ಇಷ್ಟಿದ್ದರೂ ತೆಲುಗು ದಕ್ಷಿಣ ದ್ರಾವಿಡ ಗುಂಪಿನ ಕಡೆಗೆ ವಾಲಿದೆ. ಉದಾಹರಣೆಗೆ ದಕ್ಷಿಣ ದ್ರಾವಿಡ ಭಾಷಾ ವೈಶಿಷ್ಟ್ಯಗಳಾದ ''ಕಾ'' ಕಾರ ತಾಲವ್ಯೀಕರಣ, ಚ್-ಸ್ ಲೋಪ , ಇ) ಎ. ಉ) ಒ ಪರಿವರ್ತನೆ ಇವೆ ಮೊದಲಾದ ಮಹತ್ವದ ಧ್ವನಿಯಾ ಪ್ರಕ್ರಿಯೆಗಳಲ್ಲಿ ತೆಲುಗು ದಕ್ಷಿಣ ದ್ರಾವಿಡ ಭಾಷೆಗಳಿಗೆ ಹತ್ತಿರವಾಗಿದೆ. ಇತ್ತೀಚೆಗೆ ಭ, ಕೃಷ್ಣಮೂರ್ತಿ ಅವರು ತೆಲುಗು ಹಾಗೂ ಆದರ ಸಮೀಪ ಸಂಬಂಧಿಗಳಾದ ಕುಯಿ, ಕುವಿ, ಕೊಂಡ, ಗೊಂಡಿ, ಪೆಂಗೋ ಹಾಗೂ ಮುಂಡ ಭಾಷೆಗಳನ್ನು ಮಧ್ಯ ದ್ರಾವಿಡ ಭಾಷಾ ವರ್ಗದಿಂದ ಪ್ರತ್ಯೇಕಿಸಿ ದಕ್ಷಿಣ ದ್ರಾವಿಡ ಗುಂಪಿಗೆ ಸೇರಿಸಿದ್ದಾರೆ.

1. ದಕ್ಷಿಣ ದ್ರಾವಿಡ ಭಾಷೆಗಳು :

(ತಮಿಳು, ಮಲೆಯಾಳಂ, ಕೋತ, ತೊದ,ಇರುಳ, ಕನ್ನಡ, ಕೊಡಗು, ಬಡಗ ಹವ್ಯಕ, ಸೋಲಿಗ, ಕುರುಂಬ , ತುಳು, ಕೊರಗ, ಬೆಲ್ವರಿ, ತೆಲುಗು, ಸವಾರ, ಮನ್ನೆ)

2. ಮಧ್ಯ ದ್ರಾವಿಡಭಾಷೆಗಳು : (ಕೋಲಾಮಿ, ನಾಯ್ಕಿ, ಪರ್ಜಿ, ಗದಬ, ಗೋಂಡಿ, ಕೊಂಡ, ಪಂಗೂ, ಮಂಡ, ದೋಂರ್ಲಿ ಪೋಯ ಕೊಯ, ಕುಯಿ, ಕುವಿ.)

3. ಉತ್ತರ ದ್ರಾವಿಡ ಭಾಷೆಗಳು : (ಕುರುಖ್, ಮಲ್ತೊ, ಮಲೊ, ಬ್ರಾಹೂ ಈ , ಧಾಂಗರ್)

ಕರ್ನಾಟಕ, ಅಂದ್ರ ಪ್ರದೇಶ, ತಮಿಳುನಾಡು, ಕೇರಳ, ಮುಂತಾದ ಕಡೆಗಳಲ್ಲಿ ಬಳಕೆಯಲ್ಲಿರುವ ದ್ರಾವಿಡ ಭಾಷೆಗಳನ್ನೇ ದಕ್ಷಿಣ ದ್ರಾವಿಡ ಭಾಷೆಗಳು ಎಂದು ಕರೆಯಲಾಗುತ್ತದೆ. ಇವು ದಕ್ಷಿಣ ದ್ರಾವಿಡ ಭಾಷೆಗಳನ್ನು ಪರಸ್ಪರ ಹೋಲಿಸಿ ಪರಿಶೀಲಿಸಿದಾಗ ಅವು ಮೂಲತಃ ಒಂದೇ ತಾಯಿ ಭಾಷೆಯಿಂದ ಹುಟ್ಟಬೆಳೆದು ಬಂದ ಭಾಷೆಗಳಂತೆ ಕಾಣಿಸಿಕೊಳ್ಳುತ್ತವೆ. ಇವು ತಮ್ಮ ದೇ ಆದ ಕೆಲವು ವಿಶಿಷ್ಟ ಲಕ್ಷಣಗಳನ್ನು ಉಳಿಸಿಕೊಂಡಿರುವ ಭಾಷೆಗಳಾಗಿವೆ. ಮೂಲ ದ್ರಾವಿಡದ ಶಬ್ದಗಳ ಆದಿಯ 'ಕ' ಕಾರವು ಕೆಲವು ದಕ್ಷಿಣ ದ್ರಾವಿಡ ಭಾಷೆಗಳಲ್ಲಿ 'ಚ' ಕಾರವಾಗಿ ಪರಿವರ್ತನೆಯಾಗಿದ್ದರೆ ಮತ್ತೆ ಕೆಲವು ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ಹಾಗೆಯೇ ಉಳಿದು ಕೊಂಡಿದೆ. ಮೂಲ ದ್ರಾವಿಡ ಶಬ್ದ ಆದಿಯಲ್ಲಿ ಕಂಡುಬರುವ ಚ ಕಾರವು ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ಪೂರ್ಣವಾಗಿ ಲೋಪವಾಗಿದ್ದರೆ ಮತ್ತೆ ಕೆಲವು ಭಾಷೆಗಳಲ್ಲಿ ಅದು ನ ಕಾರವಾಗಿ ಪರಿವರ್ತನೆಯಾಗಿದೆ. ಶಬ್ದಗಳ ಆದಿಯಲ್ಲಿ ಕಂಡು ಬರುವ ಮೂಲ ದ್ರಾವಿಡ ಇ ಮತ್ತು ಉ ಎಂಬ ಹ್ರಸ್ವಸ್ವರಗಳು ಕೆಲವು ದಕ್ಷಿಣ ಭಾಷೆಗಳಲ್ಲಿ ಇ) ಎ ಉ) ಒ ಎಂದು ಪರಿವರ್ತನೆಯಾಗಿದ್ದರೆ ತಮಿಳು, ಮಲೆಯಾಳಂ ಮುಂತಾದ ಭಾಷೆಗಳಲ್ಲಿ ಇ ಕಾರ ಎ ಕಾರವಾಗಿ ಉ ಕಾರ ಒ ಕಾರವಾಗಿ ಪರಿವರ್ತನೆಯಾಗಿಲ್ಲ. ಈ ಪ್ರಕ್ರಿಯೆ ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ಮೂಲ ದಕ್ಷಿಣ ದ್ರಾವಿಡ ಭಾಷೆಯ ಹಂತದಲ್ಲಿ ನಡೆದ ಪ್ರಕ್ರಿಯೆಯೇ ಇರಬೇಕೆಂದು ಕೆಲವರು ಊಹಿಸಿದ್ದಾರೆ. ಮೂರ್ಧನ್ಯ ಧ್ವನಿಗಳು ದಕ್ಷಿಣ ದ್ರಾವಿಡ ಭಾಷೆಗಳಲ್ಲಿ

ಪ್ರಧಾನವಾಗಿವೆ, ಮೂಲ ದ್ರಾವಿಡ ಭಾಷೆಯಲ್ಲಿದ್ದಿರಬಹುದೆಂದು ಊಹಿಸಲಾಗುತ್ತಿರುವ ಶಕಟರೇಫ ರೇಫ,ರಳ, ಳ, ಕುಳ ಎಂಬ ಧ್ವನಿಗಳು ಕೆಲವು ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ಉಳಿದುಕೊಂಡಿವೆ. ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳ ಪ್ರಭಾವದಿಂದ ಮಹಾಪ್ರಾಣ ಧ್ವನಿಗಳು ಕೆಲವು ಊಷ್ಮ ಮತ್ತು ಸಂಘರ್ಷ ಧ್ವನಿಗಳು, ಸಂಯುಕ್ತ ಸ್ವರಗಳು, ಅನುಸ್ವಾರ, ವಿಸರ್ಗಗಳು ಕೆಲವು ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ಕಾಣಿಸಿಕೊಳ್ಳುತ್ತವೆ, ದಕ್ಷಿಣ ದ್ರಾವಿಡದ ಎಷ್ಟೋ ಧ್ವನಿಗಳು, ಶಬ್ದಗಳು ಮಧ್ಯ ಮತ್ತು ಉತ್ತರ ದ್ರಾವಿಡ ಭಾಷೆಗಳಲ್ಲಿ ಪರಿವರ್ತನೆಗೊಂಡು ಬಳಕೆಯಲ್ಲಿವೆ. ಮಧ್ಯ ದ್ರಾವಿಡ ಭಾಷೆಯಲ್ಲಿ ಇಲ್ಲದ ಸ್ತ್ರೀಲಿಂಗ ಪ್ರತ್ಯಯ ದಕ್ಷಿಣ ದ್ರಾವಿಡ ಭಾಷೆಯಲ್ಲಿ ಬಳಕೆಯಲ್ಲಿದೆ. ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ನಿಷೇಧ ಸೂಚಕ ಪ್ರತ್ಯಯ - ಅ- ಬಳಕೆಯಲ್ಲಿದ್ದೆ, ಇದು ದ.ದ್ರಾ. ಭಾಷೆಗಳಲ್ಲಿ ಭೂತ ಕಾಲ ವಾಚಕ ಪ್ರತ್ಯಯದ ಹಿಂದೆ ಬರುತ್ತದೆ. ಇವುಗಳಲ್ಲಿ ಇಚ್ಛಾಸೂಚಕ ಪ್ರತ್ಯಯ - ಕ್ - ವು ಬಳಕೆಯಲ್ಲಿದೆ, ಕನ್ನಡದಲ್ಲಿ ಕ್ ಕ್ಕೆ ಬದಲು ಅಲಿ ಎಂಬ ಪ್ರತ್ಯಯ ಬಳಕೆಯಲ್ಲಿದೆ, ಕೆಲವು ದ್ರಾವಿಡ ಭಾಷೆಗಳಲ್ಲಿ ಮೂಲ ದ್ರಾವಿಡ ವ ಕಾರವು ಬ ಕಾರವಾಗಿ ಬಳಕೆಯಲ್ಲಿದೆ, ಈ ಬೇರೆ ಬೇರೆ ಅಂಶಗಳ ಜೊತೆಗೆ ದಕ್ಷಿಣ ದ್ರಾವಿಡ ಭಾಷೆಗಳು ತಮ್ಮದೇ ಆದ ಇನ್ನು ಕೆಲವು ವಿಶಿಷ್ಟ ಅಂಶಗಳನ್ನು ಸಂಪಾದಿಸಿಕೊಂಡಿವೆ ಎನ್ನಬಹುದು.

ಆಂಧ್ರಪ್ರದೇಶ, ಮಹಾರಾಷ್ಟ್ರ, ಮಧ್ಯ ಪ್ರದೇಶ, ಒರಿಸ್ಸಾ, ಬಿಹಾರ, ಪಶ್ಚಿಮಬಂಗಾಳ ಮುಂತಾದ ಕಡೆಗಳಲ್ಲಿ ಬಳಕೆಯಲ್ಲಿರುವ ದ್ರಾವಿಡ ಭಾಷೆಗಳನ್ನ ಭೌಗೋಳಿಕವಾಗಿ ಮಧ್ಯದ್ರಾವಿಡ ಭಾಷೆಗಳು ಎಂದು ಕರೆಯಲಾಗುತ್ತದೆ. ಇವು ಮಧ್ಯ ಭಾರತದ ಬೇರೆ ಬೇರೆ ಕಡೆಗಲಲ್ಲಿ ಬಳಕೆಯಲ್ಲಿವೆ, ಇವುಗಳನ್ನು ಪರಸ್ಪರ ಹೋಲಿಸಿ ಪರಿಶೀಲಿಸಿದಾಗ ಇವು ಮೂಲತಃ ಒಂದೇ ತಾಯಿ ಭಾಷೆಯಿಂದ ಹುಟ್ಟಿ ಬೆಳೆದು ಬಂದ ಭಾಷೆಗಳಂತೆ ಕಾಣಿಸಿಕೊಳ್ಳುತ್ತವೆ. ಈ ಮಧ್ಯ ದ್ರಾವಿಡ ಭಾಷೆಗಳು ತಮ್ಮದೇ ಆದ ಕೆಲವು ಅಂಶಗಳನ್ನು ಹೊಂದಿರುವ ಭಾಷೆಗಳಾಗಿವೆ. ಇದರಲ್ಲಿ ಪ್ರಥಮ ಪುರುಷ, ಏಕವಚನ ಸ್ತ್ರೀಲಿಂಗರೂಪವು ಅಮಹತ್ ವರ್ಗಕ್ಕೆ ಸೇರಿದರೆ ಇದು ತೆಲುಗಿನಲ್ಲಿ ಮಹತ್ ವರ್ಗಕ್ಕೆ ಸೇರುತ್ತದೆ. ಮಧ್ಯ ದ್ರಾವಿಡ ಭಾಷೆಯಲ್ಲಿ ನಪುಂಸಕಲಿಂಗ ಏಕವಚನದ ಮೂಲಕವೇ ಸ್ತ್ರೀಲಿಂಗ ವ್ಯಕ್ತವಾಗುತ್ತದೆ. ಇದರಲ್ಲಿ ದ. ದ್ರಾ. ಭಾಷೆ ಗಳಲ್ಲಿರುವಂತೆ ಸ್ತ್ರೀಲಿಂಗ ಸೂಚಕ ರೂಪಗಳ ಅಂತ್ಯದಲ್ಲಿ ಅಲ್ ಎಂಬ ಪ್ರತ್ಯಯವು ಬಳಕೆಯಲ್ಲಿದೆ. ಇಂಡೋ ಆರ್ಯನ್ ಮುಂತಾದ ಭಾಷೆಗಳ ಪ್ರಭಾವದಿಂದ ಮಧ್ಯ ದ್ರಾವಿಡ ಭಾಷೆಗಳಲ್ಲಿ ಹೆಚ್ಚು ಭಾಷೆಗಳು ಮೂರ್ಧನ್ಯ ಧ್ವನಿಗಳನ್ನು ಕಳೆದು ಕೊಂಡಿವೆ ಮೂಲ ದ್ರಾವಿಡದ ಭೂತಕಾಲ ನಿಷೇಧ ಸೂಚಕರಚನೆ, ಕವು ಚ ಕಾರ ವಾಗಿ ಪರಿವರ್ತನೆ ಮತ್ತು ಕೆಲವೆಡೆ 'ಸ' ಕಾರವಾಗಿ ಬಳಕೆಯಲ್ಲಿದೆ ಮಧ್ಯ ದ್ರಾವಿಡ ಭಾಷೆಗಳು ಇವುಗಳ ಜೊತೆಗೆ ಇನ್ನು ಬೇರೆ ಬೇರೆ ವೈಶಿಷ್ಟಗಳನ್ನು ಸಂಪಾದಿಸಿಕೊಂಡಿವೆ. ಇವು ತಮ್ಮದೇ ಅದ ಶಬ್ದ ಸಮೂಹವನ್ನು ಹೊಂದಿವೆ ಎನ್ನಬಹುದು.

ಅಸ್ಸಾಮ್, ನೇಪಾಳ, ಹಿಮಾಚಲ ಪ್ರದೇಶ, ಸಿಕ್ಕಿಂ, ನಾಗಾಲ್ಯಾಂಡ್, ಪಶ್ಚಿಮಬಂಗಾಳ ಮುಂತಾದ ಕಡೆಗಳಲ್ಲಿ ಬಳಕೆಯಲ್ಲಿರುವ ದ್ರಾವಿಡ ಭಾಷೆಗಳನ್ನೇ ಉತ್ತರ ದ್ರಾವಿಡ ಭಾಷೆಗಳು ಎನ್ನುವರು. ಇವು ಉತ್ತರ ಭಾರತದ ಬೇರೆ ಬೇರೆ ಭಾಘಗಳಲ್ಲಿ ಬಳಕೆಯಲ್ಲಿವೆ. ಇವು ಅಂತರಿಕವಾಗಿ ಸಾಕಷ್ಟು ಸಾಮ್ಯಹೊಂದಿರುವ ಭಾಷೆಗಳಾಗಿವೆ. ಇವು ಮೂಲತಃ ಒಂದೇ ತಾಯಿ ಭಾಷೆಯಿಂದ ಹುಟ್ಟಿ ಬೆಳೆದು ಬಂದ ಭಾಷೆಗಳಾಗಿ ಕಾಣಿಸಿಕೊಳ್ಳುತ್ತವೆ. ಈ ವರ್ಗಕ್ಕೆ ಸೇರಿದ ಬ್ರಾಹೊ ಈ ಭಾಷೆ

ಮಾತ್ರ ಭಾರತದ ಹೊರಗೆ ಬಳಕೆಯಲ್ಲಿದೆ. ಧಾಂಗಿರ್ ಬಾಷೆ ನೇಪಾಳದ ದಕ್ಷಿಣ ಭಾಗದಲ್ಲಿ ಬಳಕೆಯಲ್ಲಿದೆ. ಉತ್ತರ ದ್ರಾವಿಡ ಭಾಷೆಗಳು ತಮ್ಮದೇ ಆದ ಕೆಲವು ವೈಶಿಷ್ಟ್ಯಗಳನ್ನು ಸಂಪಾದಿಸಿಕೊಂಡಿವೆ. ಮೂಲ ದ್ರಾವಿಡ ಶಬ್ದದ ಆದಿಯ 'ತ' ಕಾರವು ಉತ್ತರ ದ್ರಾವಿಡ ಬಾಷೆಗಳಲ್ಲಿ 'ಕ' ಕಾರವಾದರೆ ಮಧ್ಯದ್ರಾವಿಡಭಾಷೆಯಲ್ಲಿ 'ಸ' ಕಾರವಾಗಿ ಪರಿವರ್ತನೆಯಾಗುತ್ತದೆ. ಉತ್ತರ ದ್ರಾವಿಡ ಭಾಷೆಗಳ ಭೂತಕಾಲ ವಾಚಕ ಪ್ರತ್ಯಯ 'ಕ್'ವು ಕೆಲವು ಕಡೆ 'ಚ' ಕಾರವಾಗಿ ಪರಿವರ್ತನೆಯಾಗುತ್ತದೆ. ಇದು ದಕ್ಷಿಣ ದ್ರಾವಿಡ ಭಾಷೆಗಳ ಕೆಲವು ಕಡೆ ಹಾಗೆಯೇ ಉಳಿದು ಕೊಂಡಿದ್ದರೂ ಹೆಚ್ಚು ಬಳಕೆಯಲಿಲ್ಲ, ಉ.ದ್ರಾ ಭಾಷೆಗಳಲ್ಲಿ ಭೂತಕಾಲವಾಚಕ ಪ್ರತ್ಯಯ 'ಒ' ವು ಹೆಚ್ಚು ಬಳಕೆಯಲ್ಲಿದೆ, ಆದರೆ ಉಳಿದ ಯಾವ ದ್ರಾವಿಡ ಭಾಷೆಗಳಲ್ಲಿಯೂ ಇದು ಹೆಚ್ಚು ಬಳಕೆಯಲಿಲ್ಲ, ಮೂಲ ದ್ರಾವಿಡ 'ನ' ಎಂಬ ಸರ್ವನಾಮರೂಪದಿಂದ ಬೆಳೆದು ಬಂದ ಕೆಲವು ಪ್ರಶ್ನಾರ್ಥಕ ಸರ್ವನಾಮ ರೂಪಗಳು ಉತ್ತರ ದ್ರಾವಿಡ ಭಾಷೆಗಳಲ್ಲಿ ಹೆಚ್ಚು ಬಳಕೆಯಲ್ಲಿವೆ. ಉತ್ತರ ದ್ರಾವಿಡ ಭಾಷೆಗಳು ಮಧ್ಯ ದ್ರಾವಿಡಭಾಷೆಗಳಂತೆ ಕೆಲವು ವಿಶಿಷ್ಟವಾದ ಶಬ್ದ ಸಮೂಹವನ್ನು ಸಂಪಾದಿಸಿಕೊಂಡಿವೆ.

ಆಧುನಿಕ ಭಾಷಾ ವಿಜ್ಞಾನಿಗಳು ದ್ರಾವಿಡ ಭಾಷೆಗಳನ್ನು ಮೇಲಿನಂತೆ ಮೂರು ವರ್ಗಗಳಲ್ಲಿ ವರ್ಗೀಕರಿಸಿಕೊಳ್ಳಲು ಪ್ರಯತ್ನಿಸಿದ್ದಾರೆಯಾದರೂ ಇವುಗಳಲ್ಲಿ ತೆಲುಗು, ತುಳು, ಮತ್ತು ಕೊಡಗು ಭಾಷೆಗಳ ಸ್ಥಾನ ಇನ್ನು ಸ್ಪಷ್ಟವಾಗಿಲ್ಲ. ತೆಲುಗು ಭಾಷೆ ಕೆಲವು ಅಂಶಗಳಲ್ಲಿ ದಕ್ಷಿಣ ದ್ರಾವಿಡ ಭಾಷೆಗಳನ್ನು, ಮತ್ತೆ ಕೆಲವು ಅಂಶಗಳಲ್ಲಿ ಮಧ್ಯದ್ರಾವಿಡ ಭಾಷೆಗಳನ್ನು ಹೆಚ್ಚು ಹೋಲುವುದು ಅದರಿಂದ ಇದನ್ನು ದಕ್ಷಿಣ ದ್ರಾವಿಡ ಭಾಷೆ ಎನ್ನಬೇಕೆ? ಅಥವಾ ಮಧ್ಯ ದ್ರಾವಿಡ ಭಾಷೆ ಎನ್ನಬೇಕೆ? ಎನ್ನುವುದೊಂದು ದೊಡ್ಡ ಪ್ರಶ್ನೆ. ತೆಲುಗು ಆಂದ್ರಪ್ರದೇಶದಲ್ಲಿ ಬಹು ವಿಶಾಲವಾದ ಕ್ಷೇತ್ರದಲ್ಲಿ ಬಳಕೆಯಲ್ಲಿದೆ. ಇದನ್ನು ಆಡುವವರ ಸಂಖ್ಯೆ ಹೆಚ್ಚು. ನೆರೆಹೊರೆಯ ಭಾಷೆಗಳ ಪ್ರಭಾವ ತೆಲುಗು ಭಾಷೆಯ ಮೇಲೆ ಉಂಟಾಗಿದೆ. ದ್ರಾವಿಡ ಭಾಷೆಗಳಲ್ಲಿ ತೆಲುಗು ಭಾಷೆಯ ಸ್ಥಾನವನ್ನು ನಿರ್ಧರಿಸಿ ವಿವರಿಸಿಕೊಳ್ಳಲು ಹೊರಟ ಕೆಲವು ವಿದ್ವಾಂಸರಲ್ಲಿ ಭ.ಕೃಷ್ಣಮೂರ್ತಿ , ಎಂ.ಬಿ. ಎಮೆನೊ, ಟಿ.ಬರೋ. ಸೌತ್ ವರ್ತ್ ಮುಂತಾದವರು ಮುಖ್ಯರೆನಿಸಿಕೊಂಡಿದ್ದಾರೆ. ಇವರಲ್ಲಿ ಕೆಲವರು ತೆಲುಗು ಭಾಷೆಯನ್ನು ಮಧ್ಯದ್ರಾವಿಡ ಮತ್ತು ಮಧ್ಯ ದ್ರಾವಿಡ ಭಾಷೆಗಳ ಮಧ್ಯವರ್ತಿ ಭಾಷೆಯನ್ನಾಗಿ ಪರಿಗಣಿಸಿಕೊಂಡಿದ್ದಾರೆ. ತೆಲುಗು ಧ್ವನ್ಯಾತ್ಮಕ ಹಾಗೂ ಭೌಗೋಳಿಕವಾಗಿ ದಕ್ಷಿಣ ದ್ರಾವಿಡ ಭಾಷಾವರ್ಗಕ್ಕೂ, ವ್ಯಾಕರಣ ಮತ್ತು ಶಬ್ದಕೋಶಕೆ ಸಂಬಂಧಿಸಿದಂತೆ ಮಧ್ಯೆ ದ್ರಾವಿಡ ಭಾಷಾ ವರ್ಗಕ್ಕೂ ಬಹು ಹತ್ತಿರವಾದ ಭಾಷೆಯಾಗಿ ಕಾಣಿಸಿಕೊಳ್ಳುತ್ತದೆ.

ತೆಲುಗು ಯಾವ ಯಾವ ಅಂಶಗಳಲ್ಲಿ ದಕ್ಷಿಣ ದ್ರಾವಿಡ ಭಾಷೆಗಳನ್ನು ಹೋಲುತ್ತದೆ. ಮತ್ತೆ ಯಾವ ಯಾವ ಅಂಶಗಳಲ್ಲಿ ತೆಲುಗು ಮಧ್ಯ ದ್ರಾವಿಡ ಭಾಷೆಗಳನ್ನು ಹೋಲುತ್ತದೆ ಎಂಬುದನ್ನು ಪರಿಶೀಲಿಸಿ ತಿಳಿಯಬೇಕಾದದ್ದು ಅತ್ಯಗತ್ಯ. ತೆಲುಗು ಭಾಷೆಯಲ್ಲಿ ವರ್ಣ ವ್ಯತ್ಯಯ ಅಥವಾ ಅಕ್ಷರಪಲ್ಲಟ, ಸ್ವರಾನುರೂಪತೆ, ಘೋಷ ಸ್ಪರ್ಶವ್ಯಂಜನಗಳ ಬಳಕೆ,

ಲಿಂಗವ್ಯವಸ್ಥೆ ಮುಂತಾದವು ವಿಶಿಷ್ಟವಾಗಿದೆ. ಈ ಲಕ್ಷಣಗಳು ಕುಯಿ, ಕುವಿ ಮುಂತಾದ ಮಧ್ಯ ದ್ರಾವಿಡ ಭಾಷೆಗಳಲ್ಲಿಯೂ ಕಂಡುಬರುತ್ತವೆ. ತೆಲುಗು ದಕ್ಷಿಣ ದ್ರಾವಿಡ ಭಾಷೆಗಳಾದ ತಮಿಳು ಭಾಷೆಗಳ ಅನೇಕ ಅಂಶಗಳು ಕಂಡುಬರುತ್ತವೆ. ಹೀಗಾಗಿ ಕನ್ನಡ ಮತ್ತು ತಮಿಳು ಭಾಷೆಗಳು ತೆಲುಗು ಭಾಷೆಗೆ ಬಹು ಹತ್ತಿರವಾದ ಭಾಷೆಗಳಾಗಿ ಕಾಣಿಸಿಕೊಳ್ಳುತ್ತವೆ. ಇದಕ್ಕೆ ಅವುಗಳ ಭಾಷಾಪ್ರದೇಶ ಬಹು ಹತ್ತಿರವಾಗಿರುವುದು ಇನ್ನೊಂದು ಕಾರಣವಿರಬಹುದು. ಈ ಎಲ್ಲ ಕಾರಣಗಳಿಂದಾಗಿ ತೆಲುವು ಭಾಷೆ ದಕ್ಷಿಣ ದ್ರಾವಿಡ ಭಾಷೆಗಳನ್ನು ಹೋಲಲು ಸಾಧ್ಯವಾಗಿದೆ. ತೆಲುಗಿನಲ್ಲಿ ಕುಯಿ, ಕುವಿ, ಗೊಂಡಿ, ಕೊಂಡ, ಮುಂಡ, ದೋರ್ಲಿ ಮುಂತಾದ ಮಧ್ಯ ದ್ರಾವಿಡ ಭಾಷೆಗಳ ಅನೇಕ ಅಂಶಗಳು ಕಂಡು ಬರುತ್ತವೆ. ಈ ಬೇರೆ ಬೇರೆ ಭಾಷೆಗಳ ಅನೇಕ ವ್ಯಾಕರಣ ವಿಚಾರಗಳು ತೆಲುಗು ಭಾಷೆಯ ವ್ಯಾಕರಣ ವಿಚಾರಗಳನ್ನು ಹೆಚ್ಚು ಹೋಲುತ್ತವೆ. ಇದರಿಂದಾಗಿ ತೆಲುಗು ಮಧ್ಯ ದ್ರಾವಿಡ ಭಾಷೆ ಎಂಬ ನಿರ್ಧಾರಕ್ಕೆ ಬರಲು ಕಾರಣವಾಗಿದೆ. ಈ ವಿಚಾರವನ್ನು ಆಳವಾಗಿ ಪರಿಶೀಲಿಸಿದ ಭ.ಕೃಷ್ಣಮೂರ್ತಿಯವರು ತೆಲುಗು ಭಾಷೆಯನ್ನು ಮೊದಲು ಮಧ್ಯ ದ್ರಾವಿಡ ಭಾಷೆ ಎಂದು ಹೇಳಿದರಾದರೂ ಅನಂತರ ಅವರು ಮತ್ತಷ್ಟು ಪರಿಶೀಲಿಸಿ ತೆಲುಗು ಮಧ್ಯ ದ್ರಾವಿಡ ಭಾಷೆಗಳನ್ನು ಹೆಚ್ಚು ಹೋಲುತ್ತದೆ ಎಂಬ ನಿರ್ಣಯಕ್ಕೆ ಬಂದರು.

ಮಧ್ಯ ದ್ರಾವಿಡ ಭಾಷೆಗಳಲ್ಲಿ ಭೂತಕಾಲ ನಿಷೇದವನ್ನು ಸೂಚಿಸುವ ಸ್ವತಂತ್ರವಾದ ಅಕೃತಿಮಾತ್ಮಕ ರಚನೆಗಳು ಹೆಚ್ಚು ಬಳಕೆಯಲ್ಲಿವೆ. ಇವು ತೆಲುಗು ಭಾಷೆಯಲ್ಲಿಲ್ಲ. ಮಧ್ಯ ದ್ರಾವಿಡ ಭಾಷೆಗಳಲ್ಲಿ ಪುಲ್ಲಿಂಗ ಮತ್ತು ಪುಲ್ಲಿಂಗೇತರ ಎಂಬ ಭೇದ ಏಕವಚನ ಮತ್ತು ಬಹುವಚನ ಎರಡರಲ್ಲಿಯೂ ಕಂಡು ಬಂದರೆ ತೆಲುಗಿನಲ್ಲಿ ಈ ಭೇದ ಏಕವಚನದಲ್ಲಿ ಮಾತ್ರ ಕಂಡು ಬರುತ್ತದೆ. ಹೀಗೆ ತೆಲುಗು ಮಧ್ಯ ಮತ್ತು ದಕ್ಷಿನ ದ್ರಾವಿಡ ಭಾಷೆಗಳ ಅನೇಕ ಮಿಶ್ರ ಅಂಶಗಳನ್ನು ಸಂಪಾದಿಸಿಕೊಂಡಿದೆ. ಈ ಕಾರಣದಿಂದಾಗಿಯೇ ಕೆಲವು ವಿದ್ವಾಂಸರು ತೆಲುಗು ಭಾಷೆಯನ್ನು ಕೆಲವು ಅಂಶಗಳಲ್ಲಿ ದಕ್ಷಿಣ ದ್ರಾವಿಡ ಭಾಷೆ ಎಂದು ಮತ್ತೆ ಕೆಲವು ಅಂಶಗಳಲ್ಲಿ ಮಧ್ಯ ದ್ರಾವಿಡ ಭಾಷೆಗಳ ನಡುವಿನ ಮಧ್ಯವರ್ತಿ ಭಾಷೆಯನ್ನಾಗಿ ಪರಿಗಣಿಸಿಕೊಳ್ಳಲು ಯತ್ನಿಸಿದ್ದಾರೆ.

ಮೂಲ ದ್ರಾವಿಡ ಳ್ ಮತ್ತು ಣ್ ಧ್ವನಿಗಳು ತೆಲುಗು ಭಾಷೆಯಲ್ಲಿ ಲ್ ಮತ್ತು ನ್ ಧ್ವನಿಗಳಾಗಿ ಪರಿವರ್ತನೆಯಾಗಿ ಬಳಕೆಯಲ್ಲಿವೆ. ಮಧ್ಯ ದ್ರಾವಿಡ ಭಾಷೆಗಳಲ್ಲಿ ಅಕರ್ಮಕ ಕ್ರಿಯಾಪದಗಳನ್ನು ತ್, ಚ್, ಪ್, ಇಚ್, ಇತ್, ಇಪ್, ಪಿ, ತಿ. ಇ ಮುಂತಾದ ಪ್ರತ್ಯಯಗಳನ್ನು ಹೆಚ್ಚುವುದರ ಮೂಲಕ ಸಕರ್ಮಕ ಕ್ರಿಯಾಪದಗಳನ್ನಾಗಿ ರೂಪಿಸಿಕೊಳ್ಳಲಾಗುತ್ತದೆ. ಸ್ತ್ರೀ ಸೂಚಕ ಪ್ರತ್ಯಯ ಮಧ್ಯ ದ್ರಾವಿಡ ಭಾಷೆಗಳಲ್ಲಿ ಬಳಕೆಯಲ್ಲಿರುವಂತೆ ತೆಲುಗಿನಲ್ಲಿಯೂ ಬಳಕೆಯಲ್ಲಿರುವಂತೆ ತೆಲುಗಿನಲ್ಲಿಯೂ ಬಳಕೆಯಲ್ಲಿದೆ. ತೆಲುಗಿನ ಲಿಂಗವ್ಯವಸ್ಥೆ ಮತ್ತು ನಿಷೇದಾರ್ಥಕ ಕ್ರಿಯಾ ವಿಶೇಷಣಗಳು ಮಧ್ಯ ದ್ರಾವಿಡ ಭಾಷೆಗಳಿಗೆ ತುಂಬ ನಿರ್ಧಾರಕ್ಕೆ ಬಂದರು. ತೆಲುಗು ಬಹು ಪ್ರಾಚೀನ ಕಾಲದಿಂದಲೂ ದಕ್ಷಿಣ ದ್ರಾವಿಡ ಭಾಷೆಗಳಾದ ತಮಿಳು, ಕನ್ನಡ, ತುಳು, ಕೊಡಗು ಮುಂತಾದ ಭಾಷೆಗಳ ನಿಕಟ ಸಂಪರ್ಕವನ್ನು

ಪಡೆದುಕೊಂಡೇ ಬೆಳೆದುಬಂದಿದೆ. ಲಿಂಗವ್ಯವಸ್ಥೆಯ ವಿಚಾರದಲ್ಲಿ ತೆಲುಗು ಪೂರ್ಣವಾಗಿ ಮಧ್ಯ ದ್ರಾವಿಡ ಭಾಷೆಗಳನ್ನು ಹೋಲುವುದಿಲ್ಲವೆಂದು ಕೆಲವರು ಸಮರ್ಥಿಸಲು ಪ್ರಯತ್ನ ಮಾಡಿದ್ದಾರೆ. ತೆಲಗು ಭಾಷೆಯಲ್ಲಿ ಮಧ್ಯ ದ್ರಾವಿಡ ಭಾಷೆಗಳ ಪ್ರಭಾವವು ಕಂಡುಬರುತ್ತದೆ. ಆದ್ದರಿಂದಲೇ ತೆಲುಗು ಮೂರ್ಧನ್ಯ ಧ್ವನಿಗಳನ್ನು ಕಳೆದುಕೊಂಡಿದೆ. ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ಕಂಡು ಬರುವ ಥಾಲವ್ಯೀಕರಣ, ಸ್ವರ ಪರವರ್ತನೆ, ಚ್>ಸ್ ಪರಿವರ್ತನೆ, ಘೋಷ ಸ್ವರ್ಶ ಧ್ವನಿಗಳ ಬಳಕೆ ಮುಂತಾದ ಧ್ವನ್ಯಾತ್ಮಕ ವಿಚಾರಗಳು ತೆಲುಗು ಭಾಷೆಯಲ್ಲಿಯೂ ಕಂಡುಬರುತ್ತವೆ. ಈ ಕಾರಣದಿಂದ ಭ.ಕೃಷ್ಣಮೂರ್ತಿಯವರು ತೆಲುಗು ಭಾಷೆಯನ್ನು ಮೊದಮೊದಲು ಮಧ್ಯ ದ್ರಾವಿಡ ಭಾಷೆ ಎಂಬ ನಿರ್ಣಾಯಕ್ಕೆ ಬಂದರು. ಇವರು ತೆಲುಗು ಭಾಷೆಯನ್ನು ಮಾತ್ರವಲ್ಲದೆ ಕುಯಿ, ಕುವಿ,ಗೊಂಡಿ, ಕೊಂಡ, ಪೆಂಗೋ, ಮುಂಡ ದೋರ್ಲಿ ಮುಂತಾದ ಭಾಷೆಗಳನ್ನು ದಕ್ಷಿಣ ದ್ರಾವಿಡ ಭಾಷೆಗಳೆಂದೇ ಹೆಸರಿಸಿಕೊಂಡಿದ್ದಾರೆ ಕುಯಿ.ಕುವಿ,ಗೋಂಡಿ,ಕೊಂಡ, ಪೆಂಗೋ, ಮಂಡ ಮುಂತಾದ ಮಧ್ಯ ದ್ರಾವಿಡ ಭಾಷೆಗಳಿಂದ ಬೇರ್ಪಡಿಸಿ ಅವುಗಳನ್ನು ದಕ್ಷಿಣ ದ್ರಾವಿಡ ಭಾಷೆಗಳು ಎಂದು ಕರೆದಿರುವುದು ತುಂಬ ಗಮನಾರ್ಹವಾಗಿದೆ. ಇವರು ದ್ರಾವಿಡ ಭಾಷೆಗಳನ್ನು ಅವುಗಳ ಆಂತರಿಕ ಸಂಬಂಧವನ್ನು ಆಧರಿಸಿ ಬೇರೆ ಬೇರೆ ವರ್ಗ ಮತ್ತು ಉಪವರ್ಗಗಳಲ್ಲಿಯೂ ವರ್ಗೀಕರಿಸಿಕೊಳ್ಳಲು ಪ್ರಯತ್ನಿಸಿದ್ದಾರೆ.

### ದ್ರಾವಿಡ ಭಾಷೆಗಳ ವೈಶಿಷ್ಟ್ಯಗಳು

ಇಂದು ಬಳಕೆಯಲ್ಲಿರುವ ಎಲ್ಲ ದ್ರಾವಿಡ ಭಾಷೆಗಳನ್ನು ಪೂರ್ಣವಾಗಿ ಪರಿಶೀಲಿಸಿದಾಗ ಅವು ತಮ್ಮದೇ ಆದ ಕೆಲವು ವಿಶಿಷ್ಟಲಕ್ಷಣಗಳನ್ನು ಸಂಪಾದಿಸಿಕೊಂಡಿರುವುದು ಕಂಡು ಬರುತ್ತದೆ. ವಿಲಿಯಂ ಕ್ಯಾರಿ, ಕಾಲ್‌ವೆಲ್, ಕಿಟೆಲ್, ಸಿ.ಪಿ.ಬ್ರೌನ್ ಗುಂಡರ್ಟ್, ಬೆಸ್ಲಿ, ಜಾನ್‌ಫ್‌ಯಾಫ್ರಿರಕಸ್. ರಾಸ್ ಮಸ್ ರಾಸ್ಕ್, ಫ್ರಾನ್ಸಿಸ್ ವೈಟ್ ಎಲ್ಲಿಸ್, ಜಾರ್ಜ್ ಎ.ಗ್ರಿಯರ್‌ಸನ್. ಟಿ.ಬರೋ. ಎಸ್.ಭಟಾಚಾರ್ಯ ಎಂ. ಬಿ. ಎವೊನೋ, ಸುನೀತಕುಮಾರ ಚಟರ್ಜಿ, ಭ. ಕೃಷ್ಣಮೂರ್ತಿ, ಕಾಮಿಲ್ ಜ್ವೆಲೆ ಬಿಲ್ ಮುಂತಾದ ವಿದ್ವಾಂಸರು ಬೇರೆ ಬೇರೆ ದ್ರಾವಿಡ ಭಾಷೆಗಳಲ್ಲಿ ಕಂಡು ಬರುವ ವಿಶಿಷ್ಟಲಕ್ಷಣಗಳನ್ನ ತಮ್ಮ ತಮ್ಮ ಗ್ರಂಥಗಳಲ್ಲಿ ವಿವರಿಸಿಕೊಂಡಿದ್ದಾರೆ. ಇಷ್ಟೇ ಅಲ್ಲದೆ ದ್ರಾವಿಡ ಭಾಷೆಗಳು ಜಗತ್ತಿನ ಯಾವ ಭಾಷೆಗಳನ್ನು ಹೆಚ್ಚು ಹೋಲದ ತಮ್ಮದೇ ಆದ ಕೆಲವು ವಿಶಿಷ್ಟ ಲಕ್ಷಣಗಳನ್ನು ಹೊಂದಿರುವ ಸ್ವತಂತ್ರ ಹಾಗೂ ಪ್ರತ್ಯೇಕವಾದ ಭಾಷೆಗಳು ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ದ್ರಾವಿಡ ಭಾಷೆಗಳ ಧ್ವನಿಮಾಗಳನ್ನು ಗಮನಿಸಿದಾಗ ಅವು ತಮ್ಮದೆ ಆದ ಧ್ವನಿಮಾಗಳನ್ನು ಸಂಪಾದಿಸಿಕೊಂಡಿರುವುದು ಕಂಡು ಬರುತ್ತದೆ. ದ್ರಾವಿಡ ಭಾಷೆಗಳಲೆಲ್ಲಾ ಹೆಚ್ಚು ಪ್ರಾಚೀನ ಭಾಷೆಗಳಾದ ತಮಿಳು, ಕನ್ನಡ, ತೆಲುಗು, ಮಲೆಯಾಳಂ ಭಾಷೆಗಳು ಮೂಲ ದ್ರಾವಿಡ ಭಾಷೆಯ ಎಷ್ಟೋ ಧ್ವನಿಮಾಗಳನ್ನು ಉಳಿಸಿಕೊಂಡಿರುವುದು ಕಂಡುಬರುತ್ತದೆ. ಇವುಗಳ ಜೊತೆಗೆ ಬೇರೆ ಬೇರೆ ಧ್ವನಿಮಾಗಳು ಬೇರೆ ಬೇರೆ ಭಾಷೆಗಳಿಂದ ಬಂದು ಸೇರಿಕೊಂಡಿರುವುದು

ತೋರಿ ಬರುತ್ತದೆ. ದ್ರಾವಿಡ ಭಾಷೆಗಳಲ್ಲಿ ಹತ್ತು ಸ್ವರ ಧ್ವನಿಮಾಗಳು ಇಪ್ಪತ್ತು ವ್ಯಂಜನ ಧ್ವನಿಮಾಗಳು ಪ್ರಧಾನವಾಗಿದೆ ಎಂದು ಕೆಲವರ ಅಭಿಪ್ರಾಯ. ಈ ಹತ್ತು ಸ್ವರ ಧ್ವನಿಮಾಗಳಲ್ಲಿ ಐದು ಹ್ರಸ್ವ ಸ್ವರ ಧ್ವನಿಮಾಗಳು ಐದು ದೀರ್ಘ ಸ್ವರ ಧ್ವನಿಮಾಗಳು ಸೇರಿವೆ. ದ್ರಾವಿಡ ಭಾಷೆಗಳಲ್ಲಿ ಸಂಧ್ಯಕ್ಷರ ಅಥವಾ ಸಂಯುಕ್ತ ಸ್ವರಗಳು ಬಳಕೆಯಲ್ಲಿಲ್ಲ. ಸಾಹಿತ್ಯಕ ಕನ್ನಡ , ತೆಲುಗು ತಮಿಳು ಮತ್ತು ಸಂಯುಕ್ತ ಸ್ವರಗಳು ಬಳಕೆಯಲ್ಲಿಲ್ಲ. ಸಾಹಿತ್ಯಕ ಕನ್ನಡ , ತೆಲುಗು ತಮಿಳು ಮತ್ತು ಮಲೆಯಾಳಂ ಭಾಷೆಗಳಲ್ಲಿ ಈ ಸಂಧ್ಯಕ್ಷರಗಳು ಕಂಡು ಬರುತ್ತವೆ. ಆದರೂ ಇವು ದ್ರಾವಿಡವಲ್ಲ. ಇವು ಸಂಸ್ಕೃತದಿಂದ ಬಂದ ಅಕ್ಷರಗಳು. ಇವುಗಳನ್ನು ದ್ರಾವಿಡ ಭಾಷೆಗಳಲ್ಲಿ ಆಯ್ ( ಐ) ಅವ್ (ಔ) ಎಂದಾಗಿ ಉಚ್ಚರಿಸಲಾಗುತ್ತದೆ.

ದ್ರಾವಿಡ ಭಾಷೆಗಳಲ್ಲಿ ತೋರಿಬರುವ ಇಪ್ಪತ್ತು ವ್ಯಂಜನ ಧ್ವನಿಮಾಗಳಲ್ಲಿ ಹತ್ತು ಸ್ಪರ್ಶವ್ಯಂಜನ ಧ್ವನಿಮಾಗಳು ( ಪ್, ಬ್, ತ್, ದ್, ಟ್, ಡ್, ಕ್,ಗ್ ) ಒಂದು ಕಾಕಲ್ಯ ಸ್ಪರ್ಶ ವ್ಯಂಜನಧ್ವನಿಮಾ, ಮೂರು ಅನುನಾಸಿಕ ವ್ಯಂಜನ ಧ್ವನಿಮಾಗಳು, ಮೂರು ಅನುನಾಸಿಕ, ವ್ಯಂಜನ ಧ್ವನಿಮಾಗಳು (ಮ್, ನ್.ಣ್) ಮೂರು ಪಾರ್ಶ್ವಕ ವ್ಯಂಜನ ಧ್ವನಿಮಾಗಳು ( ಲ್. ರ್, ಳ) ಒಂದು ಲೋಡಿತ ಧ್ವನಿಮಾ (ರ್) ಎರಡು ಅರ್ಧ ಸ್ವರ ವ್ಯಂಜನ ಧ್ವನಿಮಾಗಳು, ಒಂದು ಸಂಘರ್ಷಿ ವ್ಯಂಜನ ಧ್ವನಿಮಾವು ಸೇರುತ್ತದೆ. ದ್ರಾವಿಡ ಭಾಷೆಗಳಲ್ಲಿ ಹೀಗೆ ಹತ್ತೊಂಬತ್ತು ಅಥವಾ ಇಪ್ಪತ್ತು ವ್ಯಂಜನ ಧ್ವನಿಮಾಗಳು ಮಾತ್ರ ಪ್ರಧಾನವಾಗಿವೆ ಎಂದು ಕೆಲವರ ಅಭಿಪ್ರಾಯ.

ದ್ರಾವಿಡ ಭಾಷೆಗಳಲ್ಲಿ ಶಬ್ದಗಳು ಸಾಮಾನ್ಯವಾಗಿ ಇಂದು ಸ್ವರಾಂತ್ಯವಾಗಿರುವುದೇ ಹೆಚ್ಚು. ಆದರೆ ಹಳೆಯ ತಮಿಳು ಕನ್ನಡ ತೆಲುಗು ಭಾಷೆಗಳಲ್ಲಿ ಕೆಲವು ಶಬ್ದಗಳು ಸಾಮಾನ್ಯವಾಗಿ ವ್ಯಂಜನಾಂತ್ಯವೇ ಆಗಿರುತ್ತದೆ. ಸಂಸ್ಕೃತ, ಇಂಗ್ಲೀಷ್, ಉರ್ದು ಪರ್ಶಿಯನ್, ಅರಾಬಿಕ್, ಪೋರ್ಚುಗ್ರೀಸ್ ಮುಂತಾದ ಭಾಷೆಗಳ ಪ್ರಭಾವದಿಂದ ದ್ರಾವಿಡ ಭಾಷೆಗಳಿಗೆ ಬಂದ ವ್ಯಂಜನಾಂತ್ಯ ಶಬ್ದಗಳು ಕೂಡ ಸ್ವರಾಂತ್ಯವಾಗಿಯೇ ಬಳಕೆಯಲ್ಲಿವೆ. ( ತೇಜಸ್ ತೇಜಸ್ಸು, ವಿದ್ವತ್, ಸ್ಕೂಲ್ -ಸ್ಕೂಲು,ಬಸ್-ಬಸ್ಸು, ಪಂಜಾಬ್ -ಪಂಜಾಬು ಇತ್ಯಾದಿ) ಈ ರೀತಿ ವ್ಯಂಜನಾಂತ್ಯ ಶಬ್ದಗಳು ಸ್ವರಾಂತ್ಯ ಶಬ್ದಗಳಾಗಿ ಮಾರ್ಪಡುವುದು ದ್ರಾವಿಡ ಭಾಷೆಗಳಲ್ಲಿ ಸುಮಾರು ಹತ್ತು ಮತ್ತು ಹನ್ನೆರಡನೆಯ ಶತಮಾನದಿಂದ ಈಚೇಗೆ ಆರಂಭವಾಗಿರಬಹುದೆಂದು ಕೆಲವರು ಊಹಿಸಿದ್ದಾರೆ ಬಹಳ ಹಿಂದೆ ಹಳೆಗನ್ನಡ ಶಬ್ದಗಳೆಲ್ಲವು ವ್ಯಂಜನಾಂತ್ಯವೇ ಆಗಿರುತ್ತಿದ್ದವು. ( ಕೊರಳ್ - ಕೊರಳು, ಬೆರಳ್ - ಬೆರಳು, ಮರಳ್ - ಮರಳು, ಪೆಣ್ಣ - ಪೆಣ್ಣು, ಹೆಣ್ಣು, ಪಾಲ್, ಪಾಲು, ಹಾಲು) ಹೊಸಗನ್ನಡದಲ್ಲಿ ವ್ಯಂಜನಾಂತ್ಯ ಶಬ್ದಗಳೆಲ್ಲವೂ ಸ್ವರಾಂತ್ಯವಾಗಿ ಬಳಕೆಯಲ್ಲಿವೆ. ತುಳು ಭಾಷೆಯಲ್ಲಿ ಎ ಎಂಬ ಸ್ವರವನ್ನು ಎರಡು ರೀತಿಯಲ್ಲಿ ಉಚ್ಚರಿಸಲಾಗುತ್ತದೆ. ಇವು ತುಳಿವಿನಲ್ಲಿ ಬೇರೆ ಬೇರೆ ಧ್ವನಿಮಾಗಳಾಗಿ ಬಳಕೆಯಲ್ಲಿವೆ. ಕೊಡಗು ಭಾಷೆಯ ಶಬ್ದಗಳ ಅಂತ್ಯದಲ್ಲಿ ಕಂಡು ಬರುವ ಇ ಮತ್ತು ಎ ಎಂಬ ಸ್ವರಗಳನ್ನು ವಿಶಿಷ್ಟವಾದ ರೀತಿಯಲ್ಲಿ ಮಧ್ಯಸ್ವರಗಳಂತೆ ಉಚ್ಚರಿಸಲಾಗುತ್ತದೆ. ಇರುಳ ಭಾಷೆಯಲ್ಲಿ ಮೂರ್ಧನ್ಯ ವ್ಯಂಜನಗಳ ಹಿಂದೆ ಅಥವಾ ಮುಂದೆ ಬರುವ

ಕೆಲವು ಸ್ವರಗಳು ಮೂರ್ಧನ್ಯೀಕೃತ ಸ್ವರಗಳಾಗಿ ಗೋಚರಿಸುತ್ತವೆ. ಇದೇ ರೀತಿ ತೊದ ಭಾಷೆಯಲ್ಲಿ ಮೂರ್ಧನ್ಯೀಕೃತ ಸ್ವರಗಳಾಗಿ ಗೋಚರಿಸುತ್ತವೆ. ಇದೇ ರೀತಿ ತೊದ ಭಾಷೆಯಲ್ಲಿ ಕೆಲವು ವಿಶಿಷ್ಟವಾದ ಸ್ವರಗಳು ಬಳಕೆಯಲ್ಲಿವೆ.ಬ್ರಾಹೂ ಈ ಭಾಷೆಯಲ್ಲಿ ಎ ಮತ್ತು ಒ ಎಂಬ ಹ್ರಸ್ವಸ್ವರ ಬಳಕೆಯಲ್ಲಿಲ್ಲ. ಸ್ವರಾನುರೂಪತೆ ದ್ರಾವಿಡಭಾಷೆಗಳಲ್ಲಿ ಕಂಡು ಬರುವ ಮತ್ತೊಂದು ವೈಶಿಷ್ಟ. ಶಬ್ದಗಳಲ್ಲಿ ಕಂಡು ಬರುವ ಸ್ವರಗಳು ಅವುಗಳ ಅಂತ್ಯ ಸ್ವರವನ್ನು ಅನುಸರಿಸಿ ಪರಿವರ್ತನೆಯಾಗುವುದು. ದ್ರಾವಿಡಭಾಷೆಗಳಲ್ಲಿ ಸರ್ವೇ ಸಾಮಾನ್ಯ ( ಉಸಿರು - ಉಸುರು, ಹಸಿರು - ಹಸುರು, ಪೆಸರು - ಪೆಸುರು, ಹೆಸರು - ಹೆಸರು ಕಾಕಲು - ಕಲಿಗಿದಿನಿ ಇತ್ಯಾದಿ) ದಕ್ಷಿಣ ದ್ರಾವಿಡ ಭಾಷೆಗಳಲ್ಲಿ ಮೂಲ ದ್ರಾವಿಡ ಇ ಸ್ವರವು ಎ ಸ್ವರವಾಗಿಯೂ ( ಇಲೈ (ತ)- ಎಲೆ (ಕ) ಎಲ (ತೆ) ಉ ಸ್ವರವು ಒ ಸ್ವರವಾಗಿಯೂ ಉಲೈತ ( ಕ) ಒಲೈ (ಕ) ಒಲ, ಪುಕೈ (ತ)ಪೊಗೆ - ಹೊಗೆ (ಕ) ಪುಗ (ತಿ) ಪರಿವರ್ತನೆಯಾಗುತ್ತವೆ. ಇದು ದ್ರಾವಿಡ ಭಾಷೆಗಳ ವಿಶಿಷ್ಟವಾದ ಲಕ್ಷಣ ವೆಂದು ಕೆಲವರ ಅಭಿಪ್ರಾಯ. ತಮಿಳ್ ಮಲೆಯಾಳಂ ಭಾಷೆಗಳಲ್ಲಿದ್ದ ಇ ಕಾರ ತೆಲುಗು ಮತ್ತು ಕನ್ನಡ ಭಾಷೆಗಳಲ್ಲಿ ಎ ಕಾರವಾಗಿಯೂ, ತಮಿಳು ಮತ್ತು ಮಲೆಯಾಳಂ ಭಾಷೆಗಳ ಎಕಾರವಾಗಿಯೂ, ತಮಿಳು ಮತ್ತು ಮಲೆಯಾಳಂ ಭಾಷೆಗಳ ಉ ಕಾರ ತೆಲುಗು ಮತ್ತು ಕನ್ನಡ ಭಾಷೆಗಳಲ್ಲಿ ಒ ಕಾರವಾಗಿಯೂ ಬದಲಾಗುವುದನ್ನು ಅವುಗಳಲ್ಲಿ ಗುರುತಿಸಿಕೊಳ್ಳಬಹುದಾಗಿದೆ.

ಮೂಲ ದ್ರಾವಿಡ ಶಬ್ದಗಳ ಆದಿಯಲ್ಲಿ ಸಂಯುಕ್ತ ವ್ಯಂಜನಗಳಾಗಲಿ, ಮಹಾಪ್ರಾಣ ವ್ಯಂಜನಗಳಾಗಲಿ, ಊಷ್ಮ ವ್ಯಂಜನಗಳಾಗಲಿ ಬರುವುದಿಲ್ಲ. ಇವು ಕೆಲವು ದ್ರಾವಿಡ ಭಾಷೆಗಳಲ್ಲಿ ಇರುವುದು ಕಂಡುಬರುತ್ತವೆಯಾದರೂ, ಇಂತಹ ವ್ಯಂಜನ ಧ್ವನಿಮಾಗಳು ಸಾಮಾನ್ಯವಾಗಿ ಬೇರೆ ಬೇರೆ ಭಾಷೆಗಳಿಂದ ಬಂದ ಧ್ವನಿಮಾಗಳಾಗಿ ಕಾಣಿಸಿಕೊಳ್ಳುತ್ತವೆ. ತೆಲುಗು, ಕುಯಿ, ಕುವಿ ಭಾಷೆಗಳಲ್ಲಿ ಶಬ್ದಗಳ ಆದಿಯಲ್ಲಿ ಕೆಲವು ವೇಳೆ ಕೆಲವು ಸಂಯುಕ್ತ ವ್ಯಂಜನಗಳು ಬಳಕೆಯಲ್ಲಿರುವುದು ಕಂಡುಬರುತ್ವೆ. ಇವು ಅಲ್ಲಲ್ಲಿ ಅಕ್ಷರ ಪಲ್ಲಟ ಅಥವಾ ವರ್ಣ ವ್ಯತ್ಯೆಯ ತತ್ವದ ಪರಿಣಾಮವಾಗಿ ಕಾಣಿಸಿಕೊಳ್ಳಲು ಸಾಧ್ಯವಾಗಿದೆ. ದ್ರಾವಿಡ ಭಾಷೆಗಳ ಕೆಲವು ಶಬ್ದಗಳ ನಡುವೆ ಸಾಮಾನ್ಯವಾಗಿ ವ್ಯಂಜನ ದ್ವಿತ್ವಗಳು ಕಾಣಿಸಿಕೊಳ್ಳುತ್ತವೆ. ಹಳಗನ್ನಡ ಶಬ್ದಗಳ ನಡುವೆ ವಿಜಾತೀಯ ಸಂಯುಕ್ತ ವ್ಯಂಜನಗಳು ಹೆಚ್ಚಾಗಿ ಕಾಣಿಸಿಕೊಂಡರೆ, ಹೊಸ ಗನ್ನಡ ಶಬ್ದಗಳ ನಡುವೆ ಸಾಮಾನ್ಯವಾಗಿ ಸಜಾತೀಯ ಸಂಯುಕ್ತ ವ್ಯಂಜನಗಳು ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ತಮಿಳು ಭಾಷೆಯ ಶಬ್ದಗಳ ಆಧಿಯಲ್ಲಿ ಅಘೋಷ ವ್ಯಂಜನ ಧ್ವನಿಮಾಗಳು ಹೆಚ್ಚಾಗಿ ಕಾಣಿಸಿಕೊಕೊಂಡರೆ, ತೆಲುಗು, ಕನ್ನಡ ಮತ್ತು ಮಲೆಯಾಳಂ ಭಾಷೆಗಳ ಶಬ್ದಗಳ ಆದಿಯಲ್ಲಿ ಅಘೋಷಮತ್ತು ಘೋಷ ವ್ಯಂಜನ ಧ್ವನಿಮಾಗಳು ಎರಡು ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ತಮಿಳಿನಲ್ಲಿ ಶಬ್ದಗಳ ನಡುವೆ ಕೆಲವು ವೇಳೆ ಘೋಷ ವರ್ಣಗಳು ಉಚ್ಚಾರದಲ್ಲಿ ಕಾಣಿಸಿಕೊಂಡರು. ಇವು ತಮಿಳಿನಲ್ಲಿ ಬೇರೆ ಬೇರೆ ಧ್ವನಿಮಾಗಳಲ್ಲ. ಆಗ ಇವು ಅಘೋಷ ವ್ಯಂಜನ ಧ್ವನಿಮಾಗಳು ಉಪಧ್ವನಿಗಳಾಗಿ ಕಾಣಿಸಿಕೊಳ್ಳುತ್ತವೆ.

ಮೂಲ ದ್ರಾವಿಡದಲ್ಲಿ ಖ್,ಳ್ ಮತ್ತು ಲ್ ಎಂಬ ಮೂರು ಪಾರ್ಶ್ವಿಕ ವ್ಯಂಜನ ಧ್ವನಿಮಾಗಳು ಇದ್ದುವೆಂದು ಕೆಲವರ ಅಭಿಪ್ರಾಯ. ಇವುಗಳಲ್ಲಿ ಮೂರ್ಧನ್ಯ ಖ್ ಎಂಬ ಧ್ವನಿಮಾವು ಕೆಲವು ದ್ರಾವಿಡ ಭಾಷೆಗಳಲ್ಲಿ ಕಣ್ಮರೆಯಾಗಿ ಹೋಗಿದ್ದರೆ ಮತ್ತೆ ಕೆಲವು ಭಾಷೆಗಳಲ್ಲಿ ಖ್ ಮತ್ತು ಳ್ ಎಂಬುದು ಬೇರೆ ಬೇರೆ ಧ್ವನಿಮಾಗಳಾಗಿ ಬಳಕೆಯಲ್ಲಿವೆ. ಮತ್ತೆ ಕೆಲವು ದ್ರಾವಿಡ ಭಾಷೆಗಳಲ್ಲಿ ರಕಾರವು ಳ ಕಾರದಲ್ಲಿ ಐಕ್ಯವಾಗಿ ಹೋಗಿದೆ. ಹಳೆಗನ್ನಡ, ಹಳೆಯ ತೆಲುಗು, ಹಳೆಯ ತಮಿಳು ಭಾಷೆಗಳಲ್ಲಿ ರ್ ಮತ್ತು ಳ್ ಎಂಬುವು ಬೇರೆ ಬೇರೆ ಧ್ವನಿಮಾಗಳಾಗಿದ್ದವು. ಈಗ ಹೊಸ ತಮಿಳು ಹೊಸತೆಲುಗು ಮತ್ತು ಹೊಸಗನ್ನಡ ಭಾಷೆಯಲ್ಲಿ ರ ಕಾರವು ಳ ಕಾರದಲ್ಲಿ ಐಕ್ಯವಾಗಿ ಹೋಗಿದೆ. ಅವುಗಳಲ್ಲಿದ್ದ ವ್ಯತ್ಯಾಸ ಈಗ ಉಳಿದುಕೊಂಡಿಲ್ಲ. ಹಳೆಯ ತೆಲುಗು ಭಾಷೆಯಲ್ಲಿ ರ ಮತ್ತು ರಿ ಎಂಬ ಪಾರ್ಶ್ವಿಳಕ ವ್ಯಂಜನ ಧ್ವನಿಮಾಗಳು ಬೇರೆ ಬೇರೆ ಧ್ವನಿಮಾಗಳಾಗಿದ್ದವು. ಈಗ ಹೊಸ ತೆಲುಗಿನಲ್ಲಿ ರೆ ಕಾರ ಲ್ ಕಾರದಲ್ಲಿ ಐಕ್ಯವಾಗಿ ಹೋಗಿದೆ. ಇದೇ ರೀತಿ ಹಳೆಯ ತಮಿಳು, ಕನ್ನಡ, ತೆಲುಗು ಭಾಷೆಗಳಲ್ಲಿ ರ' ಮತ್ತು ರ್ ಎಂಬುವು ಬೇರೆ ಬೇರೆ ಧ್ವನಿಗಳಾಗಿದ್ದವು. ಕೆಲವು ದ್ರಾವಿಡ ಭಾಷೆಗಳಲ್ಲಿ ಇವು ಈಗಲೂ ಬೇರೆ ಬೇರೆ ಧ್ವನಿಮಾಗಳಾಗಿಯೇ ಬಳಕೆಯಲ್ಲಿವೆ. ಹೊಸಗನ್ನಡ, ತೆಲುಗು, ತಮಿಳು ಭಾಷೆಗಳಲ್ಲಿ ಅರ್ಥ ವ್ಯತ್ಯಾಸಮಾಡಬಲ್ಲ ಶಕ್ತಿ ಉಳಿದಿಲ್ಲ. ಅವು ಪರಸ್ಪರ ಒಂದು ಇನ್ನೊಂದರಲ್ಲಿ ಐಕ್ಯವಾಗಿ ಹೋಗಿವೆ. ಹೊಸಗನ್ನಡ, ತೆಲುಗು, ತಮಿಳು ಭಾಷೆಯಲ್ಲಿ ಅಪೂರ್ಣವಾಗಿ ಮಾಯವಾಗಿ ಹೋಗಿವೆ. ಹೊಸಗನ್ನಡದಲ್ಲಿ ರ್‌ಕಾರ ರ್‌ಕಾರದಲ್ಲಿ ಐಕ್ಯವಾಗಿ ಹೋಗಿರುವಂತೆ ಕಂಡು ಬರುತ್ತದೆ. ಮೂಲ ದ್ರಾವಿಡ ಭಾಷೆಯಲ್ಲಿ ಯಾವ ಸಂಘರ್ಷಿ ಧ್ವನಿಮಾಗಳು ಬಳಕೆಯಲ್ಲಿರಲಿಲ್ಲ. ಕನ್ನಡ, ತೆಲುಗು, ಮಲೆಯಾಳಂ ಭಾಷೆಗಳಲ್ಲಿ ಶ್,ಷ್,ಸ್ ಎಂಬ ಊಷ್ಮ ಧ್ವನಿಗಳು ಕಂಡುಬರುತ್ತವೆ ಯಾದರೂ ಇವು ದ್ರಾವಿಡವಲ್ಲ. ಇವು ಸಂಸ್ಕೃತದಿಂದ ಬಂದ ಧ್ವನಿಮಾಗಳು ಹ್ ಎಂಬುದು ಪೂರ್ಣವಾಗಿ ದ್ರಾವಿಡವಲ್ಲ. ಇವೆಲ್ಲವೂ ದ್ರಾವಿಡೇತರ ಭಾಷೆಗಳಿಂದ ಸ್ವೀಕಾರವಾದ ಧ್ವನಿಮಾಗಳು. ಕೆಲವು ದ್ರಾವಿಡ ಭಾಷೆಗಳಲ್ಲಿ ಕ ಕಾರ ಅಥವಾ ತಕಾರ ಚಕಾರವಾಗಿ ಅದೇ ಮುಂದೆ ಸಕಾರವಾಗಿಯೂ ಬದಲಾಗುತ್ತದೆ. ಈ ಎಲ್ಲಾ ಸಂಘರ್ಷಿ ಮತ್ತು ಊಷ್ಮ ಧ್ವನಿಮಾಗಳು ದ್ರಾವಿಡ ಭಾಷೆಗಳಲ್ಲಿ ಕಾಣಿಸಿಕೊಂಡರೂ ಇವು ಬೇರೆ ಬೇರೆ ಮೂಲಗಳಿಂದ ದ್ರಾವಿಡಭಾಷೆಗಳಿಗೆ ಬಂದ ಅಂಶಗಳಾಗಿ ಕಾಣಿಸಿಕೊಳ್ಳುತ್ತವೆ.

ದ್ರಾವಿಡ ಭಾಷೆಗಳಲ್ಲಿ ಮೂರ್ಧನ್ಯ ಧ್ವನಿಮಾಗಳು ಹೆಚ್ಚು ಬಳಕೆಯಲ್ಲಿರುವುದು ಕಂಡು ಬರುತ್ತವೆ. ಇವು ದ್ರಾವಿಡ ಭಾಷೆಗಳಲ್ಲಿ ಕಂಡು ಬರುವ ಒಂದು ವೈಶಿಷ್ಟ್ಯ ಇವು ಶಬ್ದಗಳ ಆದಿಯಲ್ಲಿ ಬರುವುದು ಅಪರೂಪ. ಇವುಗಳಲ್ಲಿ ಣ್ ಮತ್ತು ಳ್ ಎಂಬ ಧ್ವನಿಮಾಗಳು ಶಬ್ದಗಳ ಆದಿಯಲ್ಲಿ ಬರಲಾರವು. ಶಬ್ದಗಳ ನಡುವೆ ಈ ಮೂರ್ಧನ್ಯ ಧ್ವನಿಗಳು ಬರುವುದು ದ್ರಾವಿಡಭಾಷೆಗಳಲ್ಲಿ ಸರ್ವೇ ಸಾಮಾನ್ಯ. ಈ ಮೂರ್ಧನ್ಯ (ಟ್,ಡ್,ಣ್,ಳ್,) ಗಳನ್ನು ಕೆಲವು ಮಧ್ಯ ದ್ರಾವಿಡ ಭಾಷೆಗಳು ಕಳೆದುಕೊಂಡು ಅವುಗಳ ಸ್ಥಾನದಲ್ಲಿ ದಂತ್ಯ ವ್ಯಂಜನ ಧ್ವನಿಮಾಗಳು ಬಳಕೆಯಲ್ಲಿರುವುದು ಕಂಡು ಬರತ್ತವೆ. ಇದಕ್ಕೆ ಬೇರೆ ಬೇರೆ ಇಂಡೋ ಯೂರೋಪಿಯನ್ ಭಾಷೆಗಳ ಪ್ರಭಾವ ಮುಖ್ಯ ಕಾರಣವಿರಬಹುದೆಂದು

ಕೆಲವರು ಅಭಿಪ್ರಾಯ ವ್ಯಕ್ತಡಿಸಿದ್ದಾರೆ. ಹೊಸ ತೆಲುಗು ಭಾಷೆಯಲ್ಲಿ ಎಲ್ಲ ಮೂರ್ಧನ್ಯ ಧ್ವನಿಮಾಗಳು ಆಯಾ ವರ್ಗದ ದಂತ್ಯ ವ್ಯಂಜನ ಧ್ವನಿಮಾಗಳಲ್ಲಿ ಐಕ್ಯವಾಗಿ ಹೋಗಿವೆ.ಇವು ಹಳೆಯ ತೆಲುಗು ಭಾಷೆಯಲ್ಲಿ ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತವೆ. ಬಹುತೇಕ ದ್ರಾವಿಡ ಭಾಷೆಗಳು ವರ್ತ್ಸ್ಯ ವ್ಯಂಜನ ಧ್ವನಿಮಾಗಳನ್ನು ಕಳೆದುಕೊಂಡಿವೆ. ಹಳೆಯ ತಮಿಳು ಮತ್ತು ಮಲೆಯಾಳಂ ಭಾಷೆಗಳಲ್ಲಿ ವರ್ತ್ಸ್ಯ ವ್ಯಂಜನ ಧ್ವನಿಮಾಗಳು ಕಾಣಿಸಿಕೊಳ್ಳುತ್ತಿದ್ದವು. ವರ್ತ್ಸ್ಯ ಧ್ವನಿಮಾಗಳನ್ನು ಕಳೆದುಕೊಂಡ ಕೆಲವು ದ್ರಾವಿಡ ಭಾಷೆಗಳು ಆಯಾ ವರ್ಗದ ದಂತ್ಯ ವ್ಯಂಜನ ಧ್ವನಿಮಾಗಳಲ್ಲಿ ಐಕ್ಯವಾಗಿ ಹೋಗಿವೆ. ಈಗಲೂ ಕೆಲವು ತಮಿಳು ಮತ್ತು ಮಲೆಯಾಳಂ ಭಾಷೆಗಳ ಉಪಭಾಷೆಗಳಲ್ಲಿ ಈ ವರ್ತ್ಸ್ಯ ಧ್ವನಿಗಳು ಬೇರೆ ಬೇರೆ ಧ್ವನಿ ಮಾಗಳಾಗಿ ಬಳಕೆಯಲ್ಲಿವೆ. ಞ ಮತ್ತು ಙ ಎಂಬ ಅನುನಾಸಿಕ ವ್ಯಂಜನ ಧ್ವನಿಮಾಗಳು ಬಹಳಷ್ಟು ದ್ರಾವಿಡ ಭಾಷೆಗಳಲ್ಲಿ ಬೇರೆ ಬೇರೆ ಧ್ವನಿಮಾಗಳಲ್ಲ. ಇವುಗಳಲ್ಲಿ ಞ ಮಲೆಯಾಳಂ ಭಾಷೆಯಲ್ಲಿ ಸ್ವತಂತ್ರವಾದ ಧ್ವನಿಮಾವಾಗಿ ಕಾಣಿಸಿಕೊಳ್ಳುತ್ತದೆ.ಞ ಎಂಬ ತಾಲವ್ಯ ಅನುನಾಸಿಕ ಧ್ವನಿಮಾದಿಂದ ಆರಂಭವಾಗುವ ಕೆಲವು ಶಬ್ದಗಳು ಮಲೆಯಾಳಂ ಭಾಷೆಗಳಲ್ಲಿ ದೊರೆಯುತ್ತವೆ.

ಮೂಲ ದ್ರಾವಿಡದಲ್ಲಿ ಶಬ್ದಗಳ ನಡುವೆ ಅನುನಾಸಿಕ ಸಮೇತರಾಗಿ ಬೇರೆ ಬೇರೆ ಅಘೋಷ ಸ್ಪರ್ಶ ಸಂಯುಕ್ತ ವ್ಯಂಜನಗಳು ಬಳಕೆಯಲ್ಲಿದ್ದವು ಎಂದು ಕೆಲವರ ಅಭಿಪ್ರಾಯ ಈ ಅನುನಾಸಿಕ ಸಮೇತವಾದ ಅಘೋಷ ಸ್ಪರ್ಶ ಸಂಯುಕ್ತ ವ್ಯಂಜನಗಳು ಅನುನಾಸಿಕ ಸಮೇತವಾದ ಘೋಷ ಸ್ಪರ್ಶ ಸಂಯುಕ್ತ ವ್ಯಂಜನಗಳಾಗಿ ಪರಿ ವರ್ತನೆಗೊಂಡು ಬಹಳಷ್ಟು ದ್ರಾವಿಡ ಭಾಷೆಗಳಲ್ಲಿ ಬಳಕೆಯಲ್ಲಿವೆ. ಅನುನಾಸಿಕ ವ್ಯಂಜನ ಧ್ವನಿಮಾಗಳಲ್ಲಿ ಮ್, ನ, ಎಂಬುವು ಶಬ್ದಗಳ ಆದಿಯಲ್ಲಿ ಬರಬಲ್ಲವು. ಉಳಿದವು ಶಬ್ದಗಳ ಆದಿಯಲ್ಲಿ ಬರುವುದು ಅಪರೂಪ.

ದ್ರಾವಿಡ ಭಾಷೆಗಳಲ್ಲಿ ಕಂಡುಬರುವ ಎ, ಒ, ಳ್, ರ್ ಱ್ ಧ್ವನಿಗಳು ಸಂಸ್ಕೃತದಲ್ಲಿಲ್ಲ. ಇವು ಬೇರೆ ಬೇರೆ ದ್ರಾವಿಡ ಭಾಷೆಗಳಲ್ಲಿ ಬಹು ಹಿಂದಿನಿಂದಲೂ ಬಳಕೆಯಲ್ಲಿವೆ. ಕನ್ನಡ, ಮಲೆಯಾಳಂ, ತೆಲುಗು ಮುಂತಾದ ಭಾಷೆಗಳಲ್ಲಿ ಕಾಣಿಸಿಕೊಳ್ಳುವ ಊಷ್ಮ ಧ್ವನಿಗಳು ದ್ರಾವಿಡವಲ್ಲ. ಇವು ಸಂಸ್ಕೃತದಿಂದ ಬಂದ ಧ್ವನಿಗಳು. ಇದೇ ರೀತಿ ಕೆಲವು ದ್ರಾವಿಡ ಭಾಷೆಗಳಲ್ಲಿ ಕಾಣಿಸಿಕೊಳ್ಳುವ ಮಹಾಪ್ರಾಣ ಧ್ವನಿಗಳು ದ್ರಾವಿಡವಲ್ಲ. ಇವು ಸಂಸ್ಕೃತ ಮುಂತಾದ ಇಂಡೋ ಯುರೋಪಿಯನ್ ಭಾಷೆಗಳಿಂದ ಬಂದ ಅಂಶಗಳಾಗಿವೆ. ಸಂಧ್ಯಕ್ಷರಗಳು, ಅನುಸ್ವಾರ, ವಿಸರ್ಗಗಳು ದ್ರಾವಿಡವಲ್ಲ. ಇವು ಕೆಲವು ದ್ರಾವಿಡ ಬಾಷೆಗಳಲ್ಲಿ ಕಂಡುಬರುತ್ತವೆ. ಇವು ಸಂಸ್ಕೃತದಿಂದ ಬಂದಂತಹವುಗಳು ಋ ೠ ಎಂಬುವೂ ಕೂಡ ದ್ರಾವಿಡವಲ್ಲ.ಇವು ಸಂಸ್ಕೃತದಿಂದ ಬಂದ ಶಬ್ದಗಳಲ್ಲಿ ಮಾತ್ರ ಕಾಣಿಸಿಕೊಳ್ಳುತ್ತವೆ. ಇವು ದ್ರಾವಿಡ ಭಾಷೆಗಳ ಮೇಲೆ ಸಂಸ್ಕೃತದ ಪ್ರಭಾವ ಅಧಿಕವಾಗಿರುವುದನ್ನು ತೋರಿಸುತ್ತವೆ. ದ್ರಾವಿಡ ಭಾಷೆಗಳ ಮೇಲೆ ಸಂಸ್ಕೃತದ ಅಧಿಕವಾಗಿರುವುದನ್ನು ತೋರುಸುತ್ತವೆ. ದ್ರಾವಿಡ ಭಾಷೆಗಳ ಮೇಲೆ ಸಂಸ್ಕೃತದ ಪ್ರಭಾವ ಒಂದು ಕಾಲದಲ್ಲಿ

ಅಧಿಕವಾಗಿದ್ದಿತು. ಇದರ ಪರಿಣಾಮವಾಗಿ ಅನೇಕ ಶಬ್ದಗಳ ಮೂಲಕ ಅನೇಕ ಧ್ವನಿಗಳು ಮತ್ತು ಧ್ವನಿಮಾಗಳು ಬೇರೆ ಬೇರೆ ದ್ರಾವಿಡ ಭಾಷೆಗಳಿಗೆ ಬಂದು ಸೇರಿದುವು ರಿ,ರ್,ಎಂಬ ಧ್ವನಿಮಾಗಳು ಪೂರ್ಣವಾಗಿ ದ್ರಾವಿಡ, ಇವು ಸಂಸ್ಕೃತವಲ್ಲ.

ದ್ರಾವಿಡ ಭಾಷೆಗಳ ಆಕೃತಿಮಾಗಳನ್ನು ಪರಿಶೀಲಿಸಿದಾಗ ಅವು ತಮ್ಮದೇ ಆದ ಆಕೃತಿಮಾಗಳನ್ನು ಸಂಪಾದಿಸಿಕೊಂಡಿರುವುದು ಕಂಡು ಬರುತ್ತವೆ. ಪ್ರಾಚೀನ ದ್ರಾವಿಡ ಭಾಷೆಗಳಲ್ಲಿ ಏಕಾಕ್ಷರ ಧಾತುರೂಪಗಳು ಸಾಮಾನ್ಯವಾಗಿ ಕಂಡುಬರುತ್ತವೆ. ಇಂದಿನ ದ್ರಾವಿಡ ಭಾಷೆಗಳಲ್ಲಿ ಆ ಏಕಾಕ್ಷರ ಧಾತುಗಳು ದ್ವಯಕ್ಷರ ಮತ್ತು ತ್ರಯಕ್ಷರ ಧಾತುಗಳಾಗಿ ಬೆಳೆದು ಬಂದಿರುವುದು ಕಂಡುಬರುತ್ತವೆ. ಈ ದ್ವಯಕ್ಷರ ಮತ್ತು ತ್ರಯಕ್ಷರ ಧಾತುಗಳು ದ್ರಾವಿಡ ಭಾಷೆಗಳಲ್ಲಿ ಇತ್ತೀಚೆಗೆ ಬೆಳೆದುಬಂದಿರಬಹುದೆಂದು ಕೆಲವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ದ್ರಾವಿಡ ಭಾಷೆಗಳು ತುರ್ಕಿ ಮುಂತಾದ ಭಾಷೆಗಳಂತೆ ಪ್ರತ್ಯಯ ಪ್ರಧಾನವಾದ ಭಾಷೆಗಳಾಗಿ ತೋರಿಬರುತ್ತವೆ. ಇವುಗಳಲ್ಲಿ ಶಬ್ದಗಳಿಗೆ ಬೇರೆ ಬೇರೆ ಪ್ರತ್ಯಯಗಳನ್ನು ಹಚ್ಚುವುದರ ಮೂಲಕ ಬೇರೆ ಬೇರೆ ಪದಗಳನ್ನು ರಚಿಸಿಕೊಳ್ಳಬಹುದಾದ ಅವಕಾಶಗಳಿವೆ. ನಾಮಪದ ಮತ್ತು ಕ್ರಿಯಾಪದಗಳ ಧಾತುರೂಪಗಳು ಬೇರೆ ಬೇರೆ ಪ್ರತ್ಯಯಗಳನ್ನ ಉತೆಗೆದುಕೊಂಡಾಗ ಅವುಗಳ ಮೂಲರೂಪಗಳು ಎಷ್ಟೇ ವ್ಯತ್ಯಾಸಗಳು ಕಾಣಿಸಿಕೊಂಡರೂ ಅವುಗಳ ಮೂಲರೂಪ ಮತ್ತು ಅವುಗಳ ಪ್ರತ್ಯಯಗಳನ್ನು ಸುಲಭವಾಗಿ ಗುರುತಿಸಿ ವಿವರಿಸಿಕೊಳ್ಳಲು ಸಾಧ್ಯವಾಗುತ್ತದೆ.

ದ್ರಾವಿಡ ಭಾಷೆಗಳಲ್ಲಿ ಪೂರ್ವ ಪ್ರತ್ಯಯಗಳು (Prepositions) ಬಳಕೆಯಲ್ಲಿಲ್ಲ.ಜಗತ್ತಿನ ಅನೇಕ ಭಾಷೆಗಳಲ್ಲಿ ಪೂರ್ವಪ್ರತ್ಯಯಗಳು ಹೆಚ್ಚು. ಇಂದು ಕೆಲವು ದ್ರಾವಿಡ ಭಾಷೆಗಳಲ್ಲಿ ಇವು ಕಾಣಿಸಿಕೊಳ್ಳುತ್ತವೆ. ಆದರೆ ಅವು ಯಾವುವು ದ್ರಾವಿಡವಲ್ಲ. ಇವು ಬೇರೆ ಬೇರೆ ಭಾಷೆಗಳಿಂದ ಬಂದ ಪ್ರತ್ಯಗಳಾಗಿವೆ. ದ್ರಾವಿಡ ಭಾಷೆಗಳಲ್ಲಿ ತುರ್ಕಿ ಭಾಷೆಯಂತೆ ಅಂತ್ಯ ಪ್ರತ್ಯಯಗಳು (Suffixes) ಹೆಚ್ಚು ಬಳಕೆಯಲ್ಲಿವೆ. ದ್ರಾವಿಡ ಭಾಷೆಗಳಲ್ಲಿ ಮಧ್ಯಪ್ರತ್ಯಯ (Infix)ಗಳು ಬಳಕೆಯಲಿಲ್ಲ. ಇವು ಆಸ್ಟ್ರಿಕ್ ಭಾಷಾವರ್ಗಕ್ಕೆ ಸೇರಿದ ಮುಂಡ, ಸಂತಾಲಿ, ಖರಿಯ ಮುಂತಾದ ಭಾಷೆಗಳಲ್ಲಿ ಕಂಡು ಬರುತ್ತವೆ.

ದ್ರಾವಿಡ ಭಾಷೆಗಳಲ್ಲಿ ಮುಖ್ಯವಾಗಿ ಎರಡು ಬಗೆಯ ವಚನಗಳು, ಮೂರು ಬಗೆಯ ಲಿಂಗಗಳು ಬಳಕೆಯಲ್ಲಿವೆ. ಸಂಸ್ಕೃತದಲ್ಲಿ ಮೂರು ಬಗೆಯ ವಚನಗಳು, (ಏಕವಚನ, ದ್ವಿವಚನ, ಬಹುವಚನ) ಮೂರು ಬಗೆಯ ಲಿಂಗಗಳು ಪ್ರಧಾನವಾಗಿದವೆ. ಸಂಸ್ಕೃತದಲ್ಲಿ ಕಂಡುಬರುವ ದ್ವಿವಚನ ದ್ರಾವಿಡ ಭಾಷೆಯಲ್ಲಿ ಬಳಕೆಯಲ್ಲಿಲ್ಲ. ದ್ರಾವಿಡ ಭಾಷೆಗಳಲ್ಲಿ ನಾಮಪದಗಳ ಏಕವಚನವನ್ನು ಸೂಚಿಸಲು ಪ್ರತ್ಯೇಕವಾದ ಪ್ರತ್ಯಯಗಳಿಲ್ಲ. ಬಹುವಚನಕ್ಕೆ ಮಾತ್ರ ಪ್ರತ್ಯೇಕವಾದ ಪ್ರತ್ಯಯಗಳು ದ್ರಾವಿಡ ಭಾಷೆಗಳಲ್ಲಿ ಬಳಕೆಯಲ್ಲಿವೆ. ದ್ರಾವಿಡ ಭಾಷೆಗಳ ಲಿಂಗ ವ್ಯವಸ್ಥೆ ಆರ್ಯ

ಭಾಷೆಗಳ ಲಿಂಗವ್ಯವಸ್ಥೆಯಂತೆ ಕ್ಲಿಷ್ಟವಲ್ಲ. ದ್ರಾವಿಡ ಭಾಷೆಗಳ ಲಿಂಗವ್ಯವಸ್ಥೆ ತುಂಬ ಸರಳ ಹಾಗೂ ಸುಲಭವಾಗಿ ಕಾಣಿಸಿಕೊಳ್ಳುತ್ತದೆ. ದ್ರಾವಿಡ ಭಾಷೆಗಳಲ್ಲಿ ಶಬ್ದಗಳನ್ನು ಅವುಗಳ ಅರ್ಥವನ್ನು ಆಧರಿಸಿ ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕ ಲಿಂಗ ಎಂದು ಮೂರು ವರ್ಗಗಳಲ್ಲಿ ವರ್ಗೀಕರಿಸಿಕೊಳ್ಳಲಾಗುತ್ತದೆ. ದ್ರಾವಿಡ ಭಾಷೆಗಳಲ್ಲಿ ಬುದ್ಧಿ ಪ್ರಧಾನವಾದುದನ್ನು ಮಹತ್‌ವರ್ಗ ಅಥವಾ ಮೇಲುವರ್ಗವೆಂದೂ, ಬುದ್ಧಿ ಗೌಣವಾದುದನ್ನು ಅಮಹತಗವರ್ಗ ಅಥವಾ ಕೆಳವರ್ಗವೆಂದೂ ಲಿಂಗವ್ಯವಸ್ಥೆಯನ್ನು ವಿವರಿಸಿಕೊಳ್ಳಲಾಗುತ್ತದೆ. ಇದನ್ನು ನೈಸರ್ಗಿಕವಾಗಿ ಸಚೇತನ ಮತ್ತು ಅಚೇತನ ಎಂಬ ದೃಷ್ಟಿಯಿಂದ ನಿರ್ಣಯಿಸಿಕೊಳ್ಳಲು ಬರುವುದಿಲ್ಲ.

ಈ ಕಾರಣದಿಂದಾಗಿಯೇ ಕೆಲವರು ದ್ರಾವಿಡ ಭಾಷೆಗಳ ಲಿಂಗವ್ಯವಸ್ಥೆ ತುಂಬ ಸರಳ ಹಾಗೂ ಸುಲಭವಾಗಿದೆ ಎನ್ನುವರು. ದ್ರಾವಿಡ ಭಾಷೆಗಳಲ್ಲಿ ಲಿಂಗಗಳು ನಾಮಪದಗಳ ಅರ್ಥಕ್ಕೆ ಅನುಗುಣವಾಗಿರುತ್ತವೆ. ದ್ರಾವಿಡ ಭಾಷೆಗಳಲ್ಲಿ ನಾಮಪದಗಳನ್ನು ಮಾನವ ಮತ್ತು ಮಾನವೇತರ, ಮೇಲುವರ್ಗ, ಕೆಳವರ್ಗ ಎಂದು ಮಾನವನ ಬುದ್ಧಿ ಶಕ್ತಿಯನ್ನು ಆಧರಿಸಿ ಹೀಗೆ ಎರಡು ಬಗೆಯಲ್ಲಿ ವಿವರಿಸಿಕೊಳ್ಳಲು ಸಾಧ್ಯವಿದೆ. ಕೆಲವು ದ್ರಾವಿಡ ಭಾಷೆಗಳಲ್ಲಿ ಸ್ತ್ರೀಲಿಂಗವನ್ನು ಮಾನವೇತರ ವರ್ಗಕ್ಕೂ ಮತ್ತೆ ಕೆಲವು ದ್ರಾವಿಡ ಭಾಷೆಗಳಲ್ಲಿ ಮೇಲುವರ್ಗಕ್ಕೂ ಸೇರಿಸಿಕೊಳ್ಳುವುದನ್ನು ಕಾಣಬಹುದಾಗಿದೆ. ಏಕವಚನದಲ್ಲಿ ಪುಲ್ಲಿಂಗ ಸ್ತ್ರೀಲಿಂಗ ಸೂಚಿಸಲು ಕೆಲವು ಪ್ರತ್ಯೇಕ ಪ್ರತ್ಯಯಗಳಿವೆಯಾದರೂ ಅವು ಕ್ರಿಯಾಪದ ಮತ್ತು ನಾಮಪದಗಳಿಗೆ ಅನುಗುಣವಾಗಿ ಬಳಕೆಯಲ್ಲಿವೆ. ತೊದ ಮತ್ತು ಬ್ರಾಹೂ ಈ ಭಾಷೆಗಳಲ್ಲಿ ವಚನ ವ್ಯವಸ್ಥೆ ಸ್ಪಷ್ಟವಾಗಿದ್ದರೆ, ಲಿಂಗವ್ಯವಸ್ಥೆ ಸ್ಪಷ್ಟವಾಗಿಲ್ಲ. ಇವುಗಳ ಲಿಂಗಭೇದವನ್ನು ನಾಮಪದಗಳ ಅರ್ಥಕ್ಕನುಗುಣವಾಗಿ ವಿವರಿಸಿಕೊಳ್ಳಬೇಕಾಗುತ್ತದೆ.

ದ್ರಾವಿಡ ಭಾಷೆಗಳು ತಮ್ಮದೇ ಆದ ವಿಭಕ್ತಿ ಪ್ರತ್ಯಯಗಳನ್ನು ಸಂಪಾದಿಸಿ ಕೊಂಡಿವೆ. ದ್ರಾವಿಡ ಭಾಷೆಗಳಲ್ಲಿ ಏಕವಚನ ಮತ್ತು ಬಹುವಚನ ರೂಪಗಳಿಗೆ ಒಂದೇ ಬಗೆಯ ವಿಭಕ್ತಿ ಪ್ರತ್ಯಯಗಳ್ನು ಹಚ್ಚಲಾಗುತ್ತದೆ. ಆದರೆ ಸಂಸ್ಕೃತದಲ್ಲಿ ಹೀಗಿಲ್ಲ. ಸಂಸ್ಕೃತದಲ್ಲಿ ಏಕವಚನ, ದ್ವಿವಚನ ಮತ್ತು ಬಹುವಚನ ರೂಪಗಳಿಗೆ ಬೇರೆ ಬೇರೆ ವಿಭಕ್ತಿ ಪ್ರತ್ಯಯಗಳನ್ನು ಹಚ್ಚಲಾಗುತ್ತದೆ. ದ್ರಾವಿಡ ಭಾಷೆಗಳಲ್ಲಿ ಪ್ರಥಮಾ ವಿಭಕ್ತಿಗೆ ಪ್ರತ್ಯೇಕವಾದ ಪ್ರತ್ಯಗಳಿಲ್ಲ. ಕೆಲವು ದ್ರಾವಿಡ ಭಾಷೆಗಳಲ್ಲಿಯೂ ಪಂಚಮೀ ವಿಭಕ್ತಿ ಪ್ರತ್ಯೇಕವಾಗಿಲ್ಲ. ಇದರ ಬಗ್ಗೆಯೂ ವಿದ್ವಾಂಸರು ಅನುಮಾನ ವ್ಯಕ್ತಪಡಿಸಿದ್ದಾರೆ.ಕೆಲವು ದ್ರಾವಿಡ ಭಾಷೆಗಳಲ್ಲಿ ತರತಮ್ಯ ಸೂಚಕ, ಸಹವರ್ತಿಸೂಚಕ, ಉದ್ದೇಶಾತ್ಮಕ ವಿಭಕ್ತಿಗಳು ಬೇರೆ ಬೇರೆ ವಿಭಕ್ತಿಗಳಾಗಿ ಬಳಕೆಯಲ್ಲಿವೆ ಎಂದು ಕೆಲವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ದ್ರಾವಿಡ ಭಾಷೆಗಳಲ್ಲಿ ಸರ್ವನಾಮಗಳು ತಮ್ಮದೇ ಆದ ರೀತಿಯಲ್ಲಿ ಬಳಕೆಯಲ್ಲಿವೆ. ಪ್ರಥಮ ಪುರುಷ ಸರ್ವನಾಮ ರೂಪಗಳಲ್ಲಿ ಲಿಂಗ ಮತ್ತು ವಚನ ಭೇಧ ಸ್ಪಷ್ಟವಾಗಿದ್ದರೆ ಉತ್ತಮ ಪುರುಷ ಮತ್ತು ಮಧ್ಯಮ ಪುರುಷ

ಸರ್ವನಾಮ ರೂಪಗಳಲ್ಲಿ ವಚನಭೇದ ಮಾತ್ರ ಕಂಡುಬರುತ್ತದೆ. ಇವಗಳಲ್ಲಿ ಲಿಂಗಭೇದವಿಲ್ಲ. ದ್ರಾವಿಡ ಭಾಷೆಗಳಲ್ಲಿ ಉತ್ತಮ ಪುರುಷ ಸರ್ವನಾಮ ಬಹುವಚನ ರೂಪಗಳಲ್ಲಿ ಸಮಾವೇಶಕ ಮತ್ತು ಅಸಮಾವೇಶಕ ಎಂಬ ಎರಡು ಬಗೆಯ ಬಹುವಚನ ರೂಪಗಳು ಕಾಣಿಸಿಕೊಳ್ಳುತ್ತವೆ. ಇವು ಹೊಸಕನ್ನಡ, ತಮಿಳು, ತೆಲುಗು ಮುಂತಾದ ದ್ರಾವಿಡ ಭಾಷೆಗಳಲ್ಲಿ ಮಾಯವಾಗಿ ಹೋಗಿವೆ. ಇವು ಸಂಸ್ಕೃತದಲ್ಲಿ ಲ್ಲ. ಎದುರಿಗೆ ಇರುವವರನ್ನು ಸೇರಿಸಿಕೊಂಡು ಹೇಳುವ ಬಹುವಚನ ರೂಪ ಸಾಮಾನ್ಯವಾಗಿ ಸಮಾವೇಶಕ (ಆಮ್) ಬಹುವಚನ ರೂಪವಾಗಿ ಕಾಣಿಸಿಕೊಂಡರೆ, ಎದುರಿಗೆ ಇರುವವರನ್ನು ಬಿಟ್ಟು ಹೇಳುವ ಬಹುವಚನರೂಪ ಸಾಮಾನ್ಯವಾಗಿ ಅಸಮಾವೇಶಕ (ನಾವು) ಬಹುವಚನ ರೂಪವಾಗಿ ಕಾಣಿಸಿಕೊಳ್ಳುತ್ತದೆ. ಈ ಎರಡು ಬಗೆಯ ಉತ್ತಮ ಪುರುಷ ಬಹುವಚನ ರೂಪಗಳು ಆಸ್ಟ್ರಿಕ್ ಭಾಷೆಗಳಲ್ಲಿ ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತವೆ ಎಂದು ಕೆಲವರ ಅಭಿಪ್ರಾಯ.

ದ್ರಾವಿಡ ಭಾಷೆಗಳಲ್ಲಿ ಸಂಖ್ಯಾವಾಚಕಗಳು ಕ್ರಮಬದ್ಧವಾಗಿದೆ. ಅವುಗಳ ರಚನೆಯನ್ನು ಗಮನಿಸಿದಾಗ ಅವುಗಳಲ್ಲಿ ಕೆಲವು ಕೂಡುವುದರ ರೀತಿಯಲ್ಲಿಯೂ ಮತ್ತೆ ಕೆಲವು ಕೂಡುವುದು ಮತ್ತು ಗುಣಿಸುವುದರ ರೀತಿಯಲ್ಲಿಯೂ ರಚನೆಯಾಗಿರುವಂತೆ ತೋರಿಬರುತ್ತವೆ. ಮತ್ತೆ ಕೆಲವು ಸಂಖ್ಯಾವಾಚಕಗಳು ಗುಣಿಸುವುದರ ರೀತಿಯಲ್ಲಿ ರಚನೆಗೊಂಡಿವೆ. ಹೀಗಾಗಿ ಸಂಖ್ಯಾವಾಚಕಗಳು ದ್ರಾವಿಡ ಭಾಷೆಗಳಲ್ಲಿ ವಿಶಿಷ್ಟವಾದ ರೀತಿಯಲ್ಲಿ ಕಂಡುಬರುತ್ತವೆ.

ದ್ರಾವಿಡ ಭಾಷೆಗಳಲ್ಲಿ ಯಾವ ಶಬ್ದಗಳು ಗುಣವಾಚಕಗಳಾಗಿರುತ್ತವೆಯೋ ಅದೇ ಶಬ್ದಗಳು ಕ್ರಿಯಾವಿಶೇಷಣಗಳೂ ಆಗಿರುತ್ತವೆ. ಇದು ದ್ರಾವಿಡ ಭಾಷೆಗಳ ಇನ್ನೊಂದು ವೈಶಿಷ್ಟ್ಯ. ಯಾವ ಶಬ್ದಗಳು ನಾಮಪದಗಳ ಹಿಂದೆ ಅಥವಾ ಮುಂದೆ ಬರಬಲ್ಲವೋ ಅವು ಸಾಮಾನ್ಯವಾಗಿ ಗುಣವಾಚಕಗಳು ಎನಿಸಿಕೊಂಡರೆ, ಯಾವ ಶಬ್ದಗಳು ಕ್ರಿಯಾಪದಗಳ ಹಿಂದೆ ಬರಬಲ್ಲವೋ ಅವು ಸಾಮಾನ್ಯವಾಗಿ ವಿಸೇಷಣಗಳು ಎನಿಸಿಕೊಳ್ಳುತ್ತವೆ. ಹೀಗಾಗಿ ದ್ರಾವಿಡ ಭಾಷೆಗಳಲ್ಲಿ ಗುಣವಾಚಕಗಳು ಮತ್ತು ಕ್ರಿಯಾ ವಿಶೇಷಣಗಳು ಬಳಕೆಯಲ್ಲಿರಲಿಲ್ಲವೆಂದು ಕೆಲವರು ಅಭಿಪ್ರಾಯ ವ್ಯಕ್ತಪಡಿಸಿದರೆ, ಮತ್ತೆ ಕೆಲವರು ದ್ರಾವಿಡ ಭಾಷೆಗಳಲ್ಲಿ ಗುಣವಾಚಕಗಳು ಮತ್ತು ಕ್ರಿಯಾವಿಶೇಷಣಗಳು ಮೊದಲಿನಿಂದಲೂ ಬಳಕೆಯಲ್ಲಿದ್ದವೆಂದು ಕೆಲವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ, ಮತ್ತೆ ಕೆಲವರು ದ್ರಾವಿಡ ಭಾಷೆಗಳಲ್ಲಿ ಗುಣವಾಚಕಗಳು ಮತ್ತು ಕ್ರಿಯಾವಿಶೇಷಣಗಳನ್ನು ಅವು ಬರುವ ಸಂದರ್ಭಕ್ಕೆ ಅನುಗುಣವಾಗಿ ವಿವರಿಸಿಕೊಳ್ಳಬೇಕಾಗುತ್ತದೆ. ದ್ರಾವಿಡ ಭಾಷೆಗಳಲ್ಲಿ ಈ ದೃಷ್ಟಿಯಿಂದಲೇ ಗುಣವಾಚಕ ಮತ್ತು ಕ್ರಿಯಾ ವಿಶೇಷಣಗಳಿಗೆ ವ್ಯತ್ಯಾಸವೇನೂ ಕಾಣಿಸಿಕೊಳ್ಳುವುದಿಲ್ಲ ಎನ್ನುವರು.

ದ್ರಾವಿಡ ಭಾಷೆಗಳಲ್ಲಿ ಯಾವ ಶಬ್ದಗಳು ಕೆಲವು ವೇಳೆ ನಾಮಪದಗಳಾಗಿರುತ್ತವೆಯೇ ಅದೇ ಶಬ್ದಗಳು ಕ್ರಿಯಾಪದಗಳು ಆಗಿರುತ್ತವೆ. ಆದ್ದರಿಂದ ಈ ಶಬ್ದಗಳನ್ನು ಅವು ತೆಗೆದುಕೊಳ್ಳುವ ಪ್ರತ್ಯಯಗಳಿಗೆ ಅನುಗುಣವಾಗಿ ಅವುಗಳನ್ನು ನಾಮಪದಗಳು ಮತ್ತು ಕ್ರಿಯಾಪದಗಳು ಎಂದು ಬೇರೆ ಬೇರೆಯಾಗಿ ವಿವರಿಸಿಕೊಳ್ಳಬೇಕಾಗುತ್ತದೆ. ಯಾವ

ಶಬ್ದಗಳು ಲಿಂಗ, ವಚನ ಮತ್ತು ವಿಭಕ್ತಿ ಪ್ರತ್ಯಯಗಳನ್ನು ತೆಗೆದುಕೊಳ್ಳುತ್ತವೆಯೋ ಅಂತಹ ಶಬ್ದಗಳನ್ನು ನಾಮಪದಗಳು ಎಂದು ಯಾವ ಶಬ್ದಗಳು ಕಾಲ ವಾಚಕ ಮತ್ತು ಅರ್ಥಕ ಪ್ರತ್ಯಯಗಳನ್ನು ತೆಗೆದುಕೊಳ್ಳುತ್ತದೆಯೊ ಅಂತಹ ಕ್ರಿಯಾಪದಗಳು ಎಂದು ವಿವರಿಸಿಕೊಳ್ಳುವುದು ದ್ರಾವಿಡ ಭಾಷೆಗಳಲ್ಲಿ ಹೆಚ್ಚು ರೂಢಿಯಲ್ಲಿದೆ. ಇದಕ್ಕೆ ಕೆಲವು ಅಪವಾದಗಳಿರಬಹುದು. ಈ ಕಾರಣದಿಂದ ದ್ರಾವಿಡ ಭಾಷೆಗಳಲ್ಲಿ ನಾಮಪದಗಳು ಮತ್ತು ಕ್ರಿಯಾ ಪದಗಳನ್ನು ವಿವರಿಸಿಕೊಳ್ಳುವಾಗ ಅವು ತೆಗೆದುಕೊಳ್ಳುವ ಪ್ರತ್ಯಯ ಮತ್ತು ಅವು ಬರುವ ಸಂದರ್ಭಗಳನ್ನು ಗಮನಕ್ಕೆ ತೆಗೆದುಕೊಳ್ಳಬೇಕಾದದ್ದು ಅತ್ಯಗತ್ಯ.

ದ್ರಾವಿಡ ಭಾಷೆಗಳಲ್ಲಿ ಕೆಲವರು ಎರಡು ಬಗೆಯ ಕಾಲಸೂಚಕ ಪ್ರತ್ಯಗಳಿವೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದರೆ, ಮತ್ತೆ ಕೆಲವರು ಮೂರು ಬಗೆಯ ಕಾಲ ವಾಚಕ ಪ್ರತ್ಯಯಗಳಿವೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಲಿಪಿರಹಿತ ದ್ರಾವಿಡ ಭಾಷೆಗಳಲ್ಲಿ ಭೂತ ಮತ್ತು ಭೂತೇತರ ಕಾಲ ಎಂಬ ಎರಡು ಬಗೆಯ ಕಾಲವಾಚಕ ಪ್ರತ್ಯಯಗಳಿದ್ದರೆ, ಬರಹದ ದ್ರಾವಿಡ ಭಾಷೆಗಳಲ್ಲಿ ಭೂತ, ವರ್ತಮಾನ ಭವಿಷ್ಯತ್ ಕಾಲ ಎಂಬ ಮೂರು ಬಗೆಯ ಕಾಲವಾಚಕ ಪ್ರತ್ಯೇಯಗಳಿವೆ. ದ್ರಾವಿಡ ಭಾಷೆಗಳಲ್ಲಿ ಮುಲತಃ ಎರಡು ಬಗೆಯ ಕಾಲವಾಚಕ ಪ್ರತ್ಯಯಗಳಿದ್ದವು ಎಂಬುದಕ್ಕೆ ಸಾಕಷ್ಟು ಆಧಾರಗಳು ದೊರೆಯುತ್ತವೆ. ಭೂತಕಾಲವು ನಡೆದು ಹೋದುದನ್ನು ವರ್ತಮಾನ ಮತ್ತು ಭವಿಷ್ಯತ್ಕಾಲಗಳು ನಡೆಯುತ್ತಿರುವುದನ್ನು ಸೂಚಿಸುತ್ತವೆ. ಭೂತಕಾಲವನ್ನು ಸೂಚಿಸಲು ಪ್ರತ್ಯೇಕ ಪ್ರತ್ಯಯಗಳಿದ್ದರೆ, ವರ್ತಮಾನ ಮತ್ತು ಭವಿಷ್ಯತ್ಕಾಲವನ್ನು ಸೂಚಿಸಲು ಒಂದೇ ಬಗೆಯ ಪ್ರತ್ಯಯಗಳಿವೆ. ಆಡು ಭಾಷೆಗಳಲ್ಲಿ ಭವಿಷ್ಯತ್ಕಾಲದ ಕೆಲಸವನ್ನು ವರ್ತಮಾನದ ಕಾಲವೇ ಸೂಚಿಸುವುದರಿಂದ ದ್ರಾವಿಡ ಭಾಷೆಗಳಲ್ಲಿ ಎರಡು ಬಗೆಯ ಕಾಲಭೇದ ಮಾತ್ರವಿದೆ ಎಂದು ಹೇಳಲು ಅವಕಾಶವಿದೆ.

ದ್ರಾವಿಡ ಭಾಷೆಗಳಲ್ಲಿ ಪೂರ್ಣಕಾಲಿಕ ಕ್ರಿಯಾಪದಗಳು ಸಾರ್ವನಾಮಿಕ ಪ್ರತ್ಯಯಗಳನ್ನು ಹೊಂದಿದ್ದರೆ ಅಪೂರ್ಣಕಾಲಿಕ ಕ್ರಿಯಾಪದಗಳು ಈ ಯಾವ ಬಗೆಯ ಸಾರ್ವನಾಮಿಕ ಪ್ರತ್ಯಯಗಳನ್ನು ಹೊಂದಿರುವುದಿಲ್ಲ. ಸಕರ್ಮಕ ಮತ್ತು ಅಕರ್ಮಕ ಭೇದ ಸೂಚಿಸಲು ಕೆಲವು ದ್ರಾವಿಡ ಭಾಷೆಗಳಲ್ಲಿ ಪ್ರತ್ಯೇಕವಾದ ಪ್ರತ್ಯಯ ಬಳಕೆಯಲ್ಲಿದ್ದರೆ ಮತ್ತೆ ಕೆಲವು ದ್ರಾವಿಡ ಭಾಷೆಗಳಲ್ಲಿ ಅವುಗಳ ವ್ಯತ್ಯಾಸವನ್ನು ಸೂಚಿಸಲು ಪ್ರತ್ಯೇಕವಾದ ಪ್ರತ್ಯಯಗಳಿಲ್ಲ. ಅಂತಹ ಸಂದರ್ಭಗಳಲ್ಲಿ ಅವು ಬರುವ ಪರಿಸರವನ್ನು ಗಮನಿಸಿ ಅವುಗಳಲ್ಲಿ ಉಂಟಾಗಿರುವ ವ್ಯತ್ಯಾಸಗಳಿಗೆ ಅನುಗುಣವಾಗಿ ಅವುಗಳ ಅರ್ಥವನ್ನು ವಿವರಿಸಿಕೊಳ್ಳಬೇಕಾಗುತ್ತದೆ.

ಸಂಸ್ಕೃತದಲ್ಲಿ ಕರ್ತರಿ ಮತ್ತು ಕರ್ಮಣಿ ಪ್ರಯೋಗಗಳಲ್ಲಿ ಅರ್ಥ ವ್ಯತ್ಯಾಸವಿದೆ. ಆದರೆ ದ್ರಾವಿಡ ಭಾಷೆಗಳಲ್ಲಿ ಇಂತಹ ಪ್ರಯೋಗಗಳಲ್ಲಿ ಅರ್ಥ ವ್ಯತ್ಯಾಸವೇನೂ ಇಲ್ಲ. ಕೆಲವು ದ್ರಾವಿಡ ಭಾಷೆಗಳಲ್ಲಿ ಇವು ಪ್ರಯೋಗವಾಗಿವೆ. ಇದಕ್ಕೆ ಸಂಸ್ಕೃತದ ಪ್ರಭಾವ ಮುಖ್ಯ ಕಾರಣವಾಗಿದೆ. ಹೀಗೆ ದ್ರಾವಿಡ ಭಾಷೆಗಳಲ್ಲಿ ಕಂಡುಬರುವ ಲಕ್ಷಣಗಳನ್ನು ಪಟ್ಟಿಮಾಡಿ ತೋರಿಸಬಹುದು.

# ಉಪಸಂಹಾರ

ಭಾರತ ಬಹುಭಾಷೆಗಳ ದೇಶ ಭಾರತದಲ್ಲಿ ಇಂದು ಎರಡು ಸಾವಿರಕ್ಕೂ ಹೆಚ್ಚು ಭಾಷೆ ಮತ್ತು ಉಪಭಾಷೆಗಳು ಬಳಕೆಯಲ್ಲಿರಬಹುದೆಂದು ಕೆಲವರು ಅಂದಾಜು ಮಾಡಿದ್ದಾರೆ. ಭಾರತದಲ್ಲಿ ಆರ್ಯಭಾಷೆಗಳು ದ್ರಾವಿಡ ಭಾಷೆಗಳು, ಆಸ್ಟ್ರಿಕ್ ಭಾಷೆಗಳು, ಟಿಬೆಟೋ ಬರ್ಮನ್ ಭಾಷೆಗಳು ಮುಖ್ಯವಾಗಿವೆ, ಈ ಎಲ್ಲ ಭಾಷೆ ಮತ್ತು ಉಪ ಭಾಷೆಗಳ ಅಧ್ಯಯನ ಸಮಗ್ರ ಹಾಗೂ ಸಮರ್ಪಕವಾಗಿ ನಡೆದಿಲ್ಲ. ಈ ಕಾರಣದಿಂದಲೇ ಭಾರತೀಯ ಭಾಷೆಗಳನ್ನು ಹೆಚ್ಚು ಸಮಗ್ರ ಹಾಗೂ ವೈಜ್ಞಾನಿಕವಾಗಿ ವರ್ಗೀಕರಿಸಿಕೊಳ್ಳಲು ಇಂದಿಗೂ ಸಾಧ್ಯವಿಲ್ಲ. ಈ ದಿಸೆಯಲ್ಲಿ ಆಳವಾದ ಸಂಶೋಧನಾ ಕಾರ್ಯ ನಡೆಯಬೇಕಾಗಿದೆ.

ಭಾರತದಲ್ಲಿ ಎಪ್ಪತ್ತಕ್ಕೂ ಹೆಚ್ಚು ದ್ರಾವಿಡ ಭಾಷೆಗಳು ಬಳಕೆಯಲ್ಲಿರಬಹುದೆಂದು ಕೆಲವರು ಊಹಿಸಿದ್ದಾರೆ. ಇಲ್ಲಿಯವರೆಗೆ ಸುಮಾರು ಮೂವತ್ತು ದ್ರಾವಿಡ ಭಾಷೆಗಲು ಮಾತ್ರ ಬೆಳಕಿಗೆ ಬಂದಿವೆ. ಇನ್ನೂ ಬೆಳಕಿಗೆ ಬಾರದ ಬೇರೆ ಬೇರೆ ದ್ರಾವಿಡ ಭಾಷೆಗಳು ಭಾರತದಲ್ಲಿ ಬಳಕೆಯಲ್ಲಿರಬಹುದು, ಭಾರತದ ಹೊರಗೆ ಕೆಲವು ದ್ರಾವಿಡ ಭಾಷೆಗಳು ಬಳಕೆಯಲ್ಲಿವೆ, ಎಂಬುದು ಎಲ್ಲರಿಗೂ ತಿಳಿದಿರುವ ಸಂಗತಿ, ಇದೇ ರೀತಿ ಜಗತ್ತಿನಾದ್ಯಂತ ಬೇರೆ ಬೇರೆ ದ್ರಾವಿಡ ಭಾಷೆಗಳು ಬಳಕೆಯಲ್ಲಿರಬಹುದು, ಈ ದಿಸೆಯಲ್ಲಿ ಆಳವಾದ ಸಂಶೋಧನಾ ಕಾರ್ಯ ನಡೆಯಬೇಕಾಗಿದೆ, ಆಗ ಮಾತ್ರ ದ್ರಾವಿಡ ಭಾಷೆ ಮತ್ತು ಉಪ ಭಾಷೆಗಳ ಸ್ಪಷ್ಟವಾದ ಚಿತ್ರಣ ನಮಗೆ ದೊರೆಯಬಹುದು.

ದ್ರಾವಿಡ ಭಾಷೆಗಳನ್ನು ಕುರಿತ ಸಂಶೋಧನೆ ವಿವಿಧ ಮುಖಗಳಲ್ಲಿ ನಡೆದು ಹೊಸಹೊಸ ಭಾಷೆಗಳು ಮತ್ತು ಉಪಭಾಷೆಗಳು ಹೊರಬಂದಿವೆ. ಹಾಗೆಯೇ ದ್ರಾವಿಡ ಭಾಷೆಗಳಿಗೆ ಸಂಬಂಧಿಸಿದ ಹೊಸ ಹೊಸ ವಿಚಾರಗಳು ಹೊರಬಂದಿವೆ, ಈ ದಿಸೆಯಲ್ಲಿ ನಡೆದಿರುವ ಸಂಶೋಧನೆ ಬಹಳ ಕಡಿಮೆ ಎಂದೇ ಹೇಳಬೇಕಾಗಿದೆ. ಎಲ್ಲಾ ದ್ರಾವಿಡ ಭಾಷೆ ಮತ್ತು ಉಪಭಾಷೆಗಳ ಸಮರ್ಪಕ ಹಾಗೂ ವೈಜ್ಞಾನಿಕ ಅಧ್ಯಯನ ನಡೆದಾಗ ಮಾತ್ರ ದ್ರಾವಿಡ ಭಾಷೆಗಳನ್ನು ಹೆಚ್ಚು ಸಮಗ್ರ ಹಾಗೂ ಸಮರ್ಪಕವಾಗಿ ವರ್ಗೀಕರಿಸಿಕೊಳ್ಳಲು ಸಾಧ್ಯವಾಗಬಹುದು. ಕನ್ನಡ ವಿಶ್ವವಿದ್ಯಾನಿಲಯ ಹಂಪಿ ಇವರ ಎಂ.ಫಿಲ್ ಪದವಿಗಾಗಿ ದ್ರಾವಿಡ ಭಾಷಾ ಪರಿವಾರಗಳು ಎಂಬ ನಿಬಂಧ ರಚಿಸುವಾಗ ಭಾಷೆಯ ಸ್ವರೂಪ ಲಕ್ಷಣ, ಭಾರತೀಯ ಭಾಷೆಗಳು, ದ್ರಾವಿಡ ಭಾಷಾ ಪರಿವಾರ, ದ್ರಾವಿಡ ಭಾಷೆಗಳ ವರ್ಗೀಕರಣ ದ್ರಾವಿಡಭಾಷೆಗಳ ವೈಶಿಷ್ಟ್ಯಗಳು ಮುಂತಾದವುಗಳನ್ನು ನೋಡುವಾಗ ಅನೇಕ ಸಮಸ್ಯೆಗಳು ಎದುರಾದವು. ದ್ರಾವಿಡ ಭಾಷೆಗಳ ಬಗೆಗಿನ ಅಧ್ಯಯನದಲ್ಲಿ ಇನ್ನು ಅನೇಕ ಕ್ಷೇತ್ರಕಾರ್ಯಗಳು ನಡೆಯಬೇಕಾಗಿದೆ. ಅದರ ಬಗೆ ಹೆಚ್ಚಿನ ಗಮನ ಹರಿಸಬೇಕಾಗಿದೆ.

# ಅಡಿ ಟಿಪ್ಪಣಿ

1. ದ್ರಾವಿಡ ಶಾಸ್ತ್ರ, ಪ್ರೋ.ಮಲ್ಲೇಪುರ ಜಿ. ವೆಂಕಟೇಶ್ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, 2003ಪುಟ ಸಂಖ್ಯೆ ೧೪
2. ಅದೇ - ಪುಟ ಸಂಖ್ಯೆ ೧೫
3. ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ - ಎಂ.ಹೆಚ್, ಕೃಷ್ಣಯ್ಯ, ಅಂಕಿತ ಪ್ರಕಾಶನ 2006, ಪುಟ ಸಂಖ್ಯೆ 2 ಅದೇ
4. ಪುಟ ಸಂಖ್ಯೆ ೪
5. ಅದೇ ಪುಟ ಸಂಖ್ಯೆ ೫
6. ಅದೇ ಪುಟ ಸಂಖ್ಯೆ ೨
7. ಭಾಷಾ ವಿಜ್ಞಾನ ಪರಿಚಯ - ಡಾ॥ ಕೆ.ಕೆಂಪೇಗೌಡ ನವಭಾರತೀ ಪ್ರಕಾಶನ ಮೈಸೂರು ೨೦೦೦ ಪುಟಸಂಖ್ಯೆ -೧೦೨
8. ಅದೇ - ಪುಟ ಸಂಖ್ಯೆ ೧೨೮
9. ಅದೇ - ಪುಟಸಂಖ್ಯೆ ೧೩೦
10. ಅದೇ ಪುಟಸಂಖ್ಯೆ ೧೪೨
11. ಛಂದಸ್ಸು ಮತ್ತು ದ್ರಾವಿಡ ಭಾಷಾ ವಿಜ್ಞಾನ ಪರಿಚಯ ಪತ್ರಿಕೆ -2 ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ ಮಾನಸಗಂಗ್ರೋತ್ರಿ ಮೈಸೂರು.

    ಪುಟಸಂಖ್ಯೆ -೫

# ಗ್ರಂಥಸೂಚಿ

ತೌಲನಿಕ ದ್ರಾವಿಡ ಭಾಷಾ ವಿಜ್ಞಾನ - ಡಾ|| ಸಂಗಮೇಶ ಸವದತ್ತಿ ಮಠ,ರೂಪ ರಶ್ಮಿ ಪ್ರಕಾಶನ, ಧಾರವಾಡ-2004

ಕನ್ನಡ ಭಾಷೆಯ ಚರಿತ್ರೆ - ಎಂ. ಎಚ್.ಕೃಷ್ಣಯ್ಯ, ಅಂಕಿತ ಪುಸ್ತಕ, ಬೆಂಗಳೂರು - 2009.

ಕನ್ನಡ ಭಾಷಾ ಸ್ವರೂಪ - ಡಾ|| ಸಂಗಮೇಶ ಸವದತ್ತಿ ಮಠ, ರೂಪ ರಶ್ಮಿ ಪ್ರಕಾಶನ, ಧಾರವಾಡ-2007

ಕನ್ನಡ ಭಾಷಾ ಸ್ವರೂಪ - ಡಾ||ಕೆ. ಎಂ. ಕೃಷ್ಣರಾವ್, ಉಷಾ ಸಾಹಿತ್ಯ ಮಾಲೆ, ಮೈಸೂರು -1968

ಭಾಷೆಯ ಬಗೆಗೆ ನೀವೇನು ಬಲ್ಲಿರಿ? - ಡಿ. ಎನ್. ಶಂಕರಭಟ್, ಭಾಷಾ ಪ್ರಕಾಶನ, ಮೈಸೂರು, 2002.

ಸಾಮಾನ್ಯ ಭಾಷಾ ವಿಜ್ಞಾನ - ಡಾ|| ಕೆಂಪೇಗೌಡ, ಭಾರತಿ ಪ್ರಕಾಶನ, ಮೈಸೂರು .1997

ತೌಲನಿಕ ದ್ರಾವಿಡ ಭಾಷಾ ವಿಜ್ಞಾನ - ಡಾ|| ಕೆಂಪೇಗೌಡ, ಭಾರತಿ ಪ್ರಕಾಶನ, ಮೈಸೂರು .1997

ದ್ರಾವಿಡ ಭಾಷಾ ವಿಜ್ಞಾನ - ಡಾ|| ಹಂಪಾ ನಾಗರಾಜಯ್ಯ, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು

ಭಾಷಾ ವಿಜ್ಞಾನ ಪರಿಚಯ - ಡಾ|| ಕೆ.ಕೆಂಪೇಗೌಡ. ನವ್ಯಭಾರತಿ ಪ್ರಕಾಶನ, ಮೈಸೂರು-2002

# ದ್ರಾವಿಡ ಭಾಷೆಗಳು
(ಪ್ರದೇಶ)




| | | | | | | | |
|---|---|---|---|---|---|---|---|
| ೧. | ಬ್ರಾಹುಈ | ೭. | ಪೆಂಗೊ | ೧೩. | ತೆಲುಗು | ೧೯. | ಕೊಡವ |
| ೨. | ಮಾಲ್ತೊ | ೮. | ಕುಇ | ೧೪. | ಬಡಗ | ೨೦. | ಕೋತ |
| ೩. | ಕುರುಖ್ | ೯. | ಕುವಿ | ೧೫. | ತೋದ | ೨೧. | ಇರುಳ |
| ೪. | ಗೊಂಡಿ | ೧೦. | ಕೊಂಡ | ೧೬. | ತಮಿಳು | ೨೨. | ಮಲಯಾಳಂ |
| ೫. | ಪರ್ಜಿ | ೧೧. | ಗದಬ | ೧೭. | ಕನ್ನಡ | | |
| ೬. | ಮಂಡ | ೧೨. | ನಾಯ್ಕಿ | ೧೮. | ತುಳು | | |


ದ್ರಾವಿಡ ಭಾಷಾ ಪರಿವಾರ
ದಕ್ಷಿಣ ದ್ರಾವಿಡ ಶಾಖೆ
ಮಧ್ಯ ದ್ರಾವಿಡ ಶಾಖೆ
ಉತ್ತರ ದ್ರಾವಿಡ ಶಾಖೆ
ತಮಿಳು-ಮಲೆಯಾಳಂ ವರ್ಗ
೧. ತಮಿಳು
೨. ಮಲೆಯಾಳಂ
೩. ತೊದ
೪. ಕೋತ
ಕನ್ನಡ ವರ್ಗ
೧. ಕನ್ನಡ
೨. ಬಡಗ
೩. ಕೊಡಗು
ತುಳು ವರ್ಗ
ತುಳು
ತೆಲುಗು ವರ್ಗ
೧. ತೆಲುಗು
೨. ಸವರ
ಕುರುಖ್-ಮಲ್ತೊ ವರ್ಗ
೧. ಕುರುಖ್
೨. ಮಲ್ತೊ
ಬ್ರಾಹುಈ ವರ್ಗ
ಬ್ರಾಹುಈ
ಕೋಲಾಮಿ-ಪರ್ಜಿ ವರ್ಗ
೧. ಕೋಲಾಮಿ
೨. ನಾಯ್ಕಿ (ಧ)
೩. ಪರ್ಜಿ
೪. ಗದಬ
೫. ಒಲ್ಲಾರಿ
ಗೋಂಡಿ-ಕೊಂಡ ವರ್ಗ
೧. ಗೋಂಡಿ
೨. ನಾಯ್ಕಿ
೩. ಪೊರ್ಜಿ
೪. ಪೆಂಗು
೫. ಕೊಂಡ
ಕುಈ-ಕುವಿ ವರ್ಗ
೧. ಕುಈ
೨. ಕುವಿ
೩. ಮುಂಡ

